KA / BG-GPO/2515/WPP-47/2009-2011




# ಕರ್ನಾಟಕ ರಾಜ್ಯಪತ್ರ

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮಾರ್ಚ್ ೫, ೨೦೦೯ (ಫಾಲ್ಗುಣ ೧೪, ಶಕ ವರ್ಷ ೧೯೩೦) | ಸಂಚಿಕೆ ೧೦ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**P£Áð I P gÁdi UÁ¹ºPg ªÁ¦dÀ¼ ¥j ºÁg DAiÀÄÃU, §¸ª¨ª£, º¦UÉèAqï, ¨AU¼ÆgÀ–560 001**
**¥ÌP I u**

**ಸಂಖ್ಯೆ: ಕರಾಆ/ಆಡಳಿತ/08/2009, ದಿನಾಂಕ:12ನೇ ಫೆಬ್ರವರಿ, 2009**

**«µAiÄB** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 09 ರಡಿಯಲ್ಲಿ ರಚಿತವಾಗಿರುವ ಈ ಕೆಳಕಂಡ ಜಿಲ್ಲಾ ವೇದಿಕೆಗಳಲ್ಲಿ ಖಾಲಿಯಾಗುವಂತಹ

| PªÄ ¸ASÉ | f¯Á ªÃ¢PAiÄ º¸gÄ | CzsÀåPÀëg ºÄz SÁ°AiiÁUÄª ¢£ÁAP |
|---|---|---|
| 1 | ಬೆಂಗಳೂರು ನಗರ ಜಿಲ್ಲಾ ಗ್ರಾಹಕರ ವೇದಿಕೆ, ಬೆಂಗಳೂರು – 09 | 08.09.2009ರ ಪೂರ್ವಾಹ್ನದಿಂದ |
| 2 | ಬೆಂಗಳೂರು ನಗರ 3ನೇ ಅಪರ ಜಿಲ್ಲಾ ಗ್ರಾಹಕರ ವೇದಿಕೆ, ಬೆಂಗಳೂರು – 20 | 08.09.2009ರ ಅಪರಾಹ್ನದಿಂದ |
| 3 | ಬೆಂಗಳೂರು ನಗರ 4ನೇ ಅಪರ ಜಿಲ್ಲಾ ಗ್ರಾಹಕರ ವೇದಿಕೆ, ಬೆಂಗಳೂರು - 20 | 30.06.2009ರ ಅಪರಾಹ್ನದಿಂದ |
| 4 | ಗುಲಬರ್ಗಾ ಜಿಲ್ಲಾ ಗ್ರಾಹಕರ ವೇದಿಕೆ ಗುಲಬರ್ಗಾ | 05.06.2009ರ ಅಪರಾಹ್ನದಿಂದ |
| 5 | ರಾಯಚೂರು ಜಿಲ್ಲಾ ಗ್ರಾಹಕರ ವೇದಿಕೆ, ರಾಯಚೂರು | 03.06.2009ರ ಅಪರಾಹ್ನದಿಂದ |
| 6 | ಕೊಡಗು ಜಿಲ್ಲಾ ಗ್ರಾಹಕರ ವೇದಿಕೆ, ಕೊಡಗು | 24.08.2009ರ ಅಪರಾಹ್ನದಿಂದ |

ಅಧ್ಯಕ್ಷರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಈ ಮೂಲಕ ಆಹ್ವಾನಿಸಲಾಗಿದೆ.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1)(ಎ) ರನ್ವಯ ಜಿಲ್ಲಾ ವೇದಿಕೆಯ ಅಧ್ಯಕ್ಷರ ಹುದ್ದೆಗೆ ಅರ್ಹರಾಗಿರುವಂತಹ ಅಭ್ಯರ್ಥಿಯು ಜಿಲ್ಲಾ ನ್ಯಾಯಾಧೀಶರ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವವರು ಅಥವಾ ಕಾರ್ಯನಿರ್ವಹಿಸಿರುವವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಆಯ್ಕೆ ಹೊಂದಲು ಅರ್ಹರಿರುವಂತಹವರಾಗಿರಬೇಕು.

ಮೇಲಿನ ಅರ್ಹತೆಯನ್ನು ಹೊಂದಿರುವಂತಹ ಅಭ್ಯರ್ಥಿಗಳು ಮೇಲಿನ ಜಿಲ್ಲಾ ವೇದಿಕೆಗಳಲ್ಲಿ ಯಾವ ಜಿಲ್ಲಾ ವೇದಿಕೆಯಲ್ಲಿ ಕಾರ್ಯನಿರ್ವಹಿಸಲು ಇಚ್ಛಿಸುತ್ತಾರೆಯೋ ಅಂತಹ ಜಿಲ್ಲಾ ವೇದಿಕೆಯ ಹೆಸರನ್ನು ನಿಗಧಿತ ಅರ್ಜಿ ನಮೂನೆಯಲ್ಲಿ ನಮೂದಿಸಿ, ಭರ್ತಿ ಮಾಡಿದ ಅರ್ಜಿ ನಮೂನೆಗಳನ್ನು ಅಗತ್ಯ ದಾಖಲೆಗಳ ದೃಢೀಕರಣ ಪ್ರತಿಗಳು ಸೀಲ್ ಮಾಡಿದ ಲಕೋಟೆಯಲ್ಲಿರಿಸಿ, ಲಕೋಟೆಯ ಮೇಲ್ಭಾಗದಲ್ಲಿ **" (f¯Á ªÃ¢PAiÄ º¸gÄ §gzÀ) f¯Á UÁºÀPg ªÁådiU¼ ¥jºÁg ªÃ¢PAiÄ CzÀåPg ºÄzU Cfð" JAzÄ z¥ CPgU¼º §gzÄ." ¢£ÁAP 31.03.2009g ¸Ae 5-00 WAmAiÆ¼UÁV P£Áð I P gÁdå UÁºÀPg ªÁådiU¼ ¥jºÁg DAiÆÃU, §¸ª ¨ª£, ºÀUÉÃAqï, ¨AU¼ÆgÄ – 01,** ಇಲ್ಲಿಗೆ ಸಲ್ಲಿಸುವುದು.

ನಿಗಧಿತ ಅರ್ಜಿ ನಮೂನೆ ಕರ್ನಾಟಕ ರಾಜ್ಯ ಆಯೋಗದ ವೆಬ್‌ಸೈಟ್ http://kscdrc.kar.nic.in ರಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟ್‌ನಿಂದ ಅರ್ಜಿಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಸಂಬಂಧಪಟ್ಟ ಜಿಲ್ಲಾ ವೇದಿಕೆಯಲ್ಲಿ ಒಂದು ಅರ್ಜಿಗೆ ರೂ.10-00 ರಂತೆ ಶುಲ್ಕವನ್ನು ಪಾವತಿ ಮಾಡಿ ಅರ್ಜಿ ನಮೂನೆಯನ್ನು ಪಡೆದುಕೊಳ್ಳಬಹುದಾಗಿರುತ್ತದೆ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್.167

## ಕೃಷಿ ಇಲಾಖೆ

## ತಿದ್ದುಪಡಿ

**ಸಂಖ್ಯೆ: ಕೃತೋಇ 53 ಕೃಪಸೇ 2009, ಬೆಂಗಳೂರು, ದಿನಾಂಕ:7ನೇ ಫೆಬ್ರವರಿ, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕೃತೋಇ 91 ಕೃಪಸೇ 2006, ದಿನಾಂಕ:30.08.2008ರ ಅನುಬಂಧ-1ರ ಕಾಲಂ 6ರಲ್ಲಿ ಶ್ರೀ ರವಿಕುಮಾರ್ ಎಸ್., ಇವರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಅವರ ಹೆಸರಿನ ಮುಂದೆ ಕಾಲಂ-5ರಲ್ಲಿ ತಿಳಿಸಿರುವಂತೆ ತಿದ್ದಿ ಓದಿಕೊಳ್ಳುವುದು.

| ಕ್ರ. ಸಂ. | ಆಯ್ಕೆ ಪಟ್ಟಿ ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ದಿ:30.08.2008ರ ಅಧಿಸೂಚನೆಯಲ್ಲಿ ನೇಮಿಸಿರುವ ಸ್ಥಳ | ತಿದ್ದಿ ಓದಿಕೊಳ್ಳಬೇಕಾಗಿರುವ ಸ್ಥಳ |
|---|---|---|---|---|
| 1 | 2 | 3 | 4 | 5 |
| 320 | 353 | ರವಿಕುಮಾರ್ ಎಸ್. ನಂಬುವರಹಳ್ಳಿ, ಲಕ್ಷ್ಮೀಪುರ ಪೋಸ್ಟ್, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ-563135 | ರೈತ ಸಂಪರ್ಕ ಕೇಂದ್ರ, ಬೆಳಗೋಡು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಸಕಲೇಶಪುರ ತಾಲ್ಲೂಕು | ಜಂಟಿ ಕೃಷಿ ನಿರ್ದೇಶಕರ ಕಛೇರಿ, ಕೋಲಾರ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಗುರಾಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ.

ಪಿ.ಆರ್.166

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ

## ಅಧಿಸೂಚನೆ

**ಸಂಖ್ಯೆ: ಕಾನಿಅ/ ಸನೀವಿ/ ಕು/ಸಿ-1/2008-09/279, ದಿನಾಂಕ:5ನೇ ಫೆಬ್ರವರಿ, 2009**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22) ರ ಅಡಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ, ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ

ಅಧಿನಿಯಮದ ಸೆಕ್ಷನ್ 5(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19(1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1 | 2 | 3 | 4 | 5 |
| 1. | ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ | ಶ್ರೀ ಟಿ. ಜಯಾನಂದಂ, ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಶ್ರೀ ಎಂ.ಐ. ಮುಧೋಳ ತಾಂತ್ರಿಕ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾ. |

**ಟಿ. ಜಯಾನಂದಂ**

ಪಿ.ಆರ್.146

ಕಾರ್ಯನಿರ್ವಾಹಕ ಅಭಿಯಂತರು,
ಸಣ್ಣ ನೀರಾವರಿ ವಿಭಾಗ, ಕುಷ್ಟಗಿ.

## PROCEEDINGS OF DEPUTY COMMISSIONER OF COMMERCIAL TAXES (RECOVERY)-1, BANGALORE DIVISION, BANGALORE

**Present:** K.Venkatesh

Deputy Commissioner of Commercial Taxes (Recovery)-1

**Subject:** Loss of "F" Forms in case of M/s Colgate Palmolive (India) Ltd., Bangalore-123.

**Read:** Letter Dated:7th November, 2008 of Colgate Palmolive (India) Ltd., Bangalore.

**Preamble:**

M/s Colgate Palmolive (India) Ltd., # 66, Heggada Devanapura, Huskur Road, Dasanapura Hobli, Bangalore, is a registered dealer under KST and CST Acts and born on the rolls of this office bearing KST number 10000331 and CST number 10050334. The company in its letter cited at read above has intimated that the following "F" Forms issued by the department have been lost at their Chennai Branch unit.

| | |
|---|---|
| Machine Serial Number of the lost forms/ certificates | 708356, 996184, 996185, 996186, 996187, 996188, 996189, 996190, 996191, 900179, 900180, 900187, 900188, 900193, 900194, 721701, 721973. |

The company has adduced the proof for having filed compliant to police authority for loss of above "F" Forms and has also executed Indemnity Bond in favour of the Government as laid down under Rule 12(2) and 12(9) of CST Act, 1956.

In the instant case since the "F" Forms mentioned as above is stated to be lost at their Branch Unit at Chennai, the forms so lost are treated as invalid. Hence the order;

**Order No. DCCT/ RECOVERY-1 BLR DVN./ 2008-09, Dated:30th January, 2009**

In view of the circumstances explained as above, the following "F" Forms are treated as invalid with the date mentioned as under;

| No. (including code No.) of declaration form/s lost/ destroyed or stolen | Name & address of the dealer to whom declaration form/s is/ are issued by the Dept. with date of issue | Registration certificate No. of the dealer under CST Act, 1956 | The address of dealer to whom the declaration is/ are sent | Date of issue of forms by the dealer | Whether lost/ destroyed or stolen | Remarks |
|---|---|---|---|---|---|---|
| HO708356 | M/s. Colgate Palmolive (India) Ltd., # 66, Heggada Devanapura, Huskur Road, Dasanapura Hobli, Bangalore. 19.02.2003 | 10050334 | Branch unit At: M/s Colgate Palmolive (India) Ltd., Qaiser Tower, IIIrd Floor, 19, Khader Nawazkhan road, Nungambakkam, Chennai-6 | 15.03.2003 | Lost | |
| HO996184 | 25.11.2003 | | | 25.02.2004 | | |
| HO996185 | ----do---- | | | 25.02.2004 | | |
| HO996186 | ----do---- | | | 25.02.2004 | | |
| HO996187 | ----do---- | | | 25.02.2004 | | |
| HO996188 | ----do---- | | | 25.02.2004 | | |
| HO996189 | ----do---- | | | 25.02.2004 | | |
| HO996190 | ----do---- | | | 25.02.2004 | | |
| HO996191 | ----do---- | | | 25.02.2004 | | |
| H900179 | 06.03.2004 | | | 09.03.2004 | | |
| H900180 | 06.03.2004 | | | 09.03.2004 | | |
| H900187 | 06.03.2004 | | | 05.04.2004 | | |
| H900188 | 06.03.2004 | | | 05.04.2004 | | |
| H900193 | 06.03.2004 | | | 15.05.2004 | | |
| H900194 | 06.03.2004 | | | 10.05.2004 | | |
| HO721701 | 24.06.2004 | | | 25.06.2004 | | |
| HO721973 | 15.10.2004 | | | 05.02.2005 | | |

Deputy Commissioner of Commercial Taxes,
PR-155 Recovery-1, Bangalore.

**ಯುವಜನ ಸೇವಾ ಇಲಾಖೆ**

**ಅಧಿಕೃತ ಜ್ಞಾಪನ**

**ಸಂಖ್ಯೆ: ಯುಸೇಇ 44 ಯುಇಸೇ 2008, ಬೆಂಗಳೂರು, ದಿನಾಂಕ:27ನೇ ಡಿಸೆಂಬರ್, 2008**

**ವಿಷಯ:** ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಲೆಕ್ಕಾಧಿಕಾರಿಗಳ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ: ಸಿವೈಎಸ್‌ಎಸ್/ ಕೆಎಟಿ, ನಂ.925/07–08, ದಿನಾಂಕ:13/17.03.2008, 24/29–07–08 ಹಾಗೂ 06.12.2008.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಲೆಕ್ಕಾಧಿಕಾರಿಗಳ ವೃಂದದ ದಿನಾಂಕ:01.01.2008 ರಲ್ಲಿರುವಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಅಧಿಕೃತ ಜ್ಞಾಪನ ಪತ್ರದೊಂದಿಗೆ ಲಗತ್ತಿಸಿ ಹೊರಡಿಸಲಾಗಿದೆ. ಈ ಜೇಷ್ಠತಾ ಪಟ್ಟಿಯಲ್ಲಿ ನ್ಯೂನತೆ ತಪ್ಪು ವಗೈರೆಗಳ ಬಗ್ಗೆ ಅಧಿಕಾರಿಗಳ ಮತ್ತು ಇಲಾಖೆಯ ಇತರೆ

ಅಧಿಕಾರಿಗಳ ಆಕ್ಷೇಪಣೆಗಳು ಇದ್ದಲ್ಲಿ ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳ ಒಳಗಾಗಿ ಸರ್ಕಾರಕ್ಕೆ ಮಾಹಿತಿಯನ್ನು ಕಳುಹಿಸಬೇಕೆಂದು ಕೋರಲಾಗಿದೆ.

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

**ದಿನಾಂಕ:01.01.2008 ರಲ್ಲಿದ್ದಂತೆ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಲೆಕ್ಕಾಧಿಕಾರಿಗಳ ವೃಂದದ ತಾತ್ಕಾಲಿಕ ಪಟ್ಟಿ**

| **ಕ್ರಮ ಸಂಖ್ಯೆ** | **ಹೆಸರು** | **ನೇರ ನೇಮಕಾತಿ ಮುಂಬಡ್ತಿ ಇತರೆ** | **ಜನ್ಮ ದಿನಾಂಕ** | **ಸರ್ಕಾರಿ ಸೇವೆಗೆ ಸೇರಿದ ದಿನಾಂಕ** | **ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ** | **ನೇಮಕಾತಿಗೆ ಜೇಷ್ಠತೆಗೆ ಅರ್ಹತಾ ದಿನಾಂಕ** |
|---|---|---|---|---|---|---|
| 1. | ಬಿ. ಕುಮಾರ ಸ್ವಾಮಿ | ಮುಂಬಡ್ತಿ | 29.03.1952 | 05.02.77 | 27.10.2000 | 27.10.2000 |

**ಎಸ್.ಜಿ. ನಾರಾಯಣ**
ಪಿಆರ್.56
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

**GOVERNMENT OF KARNATAKA**

**DIRECTORATE OF ECONOMICS AND STATISTICS, BANGALORE-1**

**Consumer Price Index Numbers For Industrial Workers**

No. DES 28 PWX 2008 Month: December, 2008

State: Karnataka Base: 1987-88=100 Date :04-02-2009

| | Group/Sub-Group | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** (a) Cereals & Products | 509 | 583 | 589 | 526 | 539 | 521 | 496 | 538 | 450 | 524 | 533 |
| | (b) Pulses & Products | 443 | 480 | 503 | 535 | 477 | 445 | 474 | 558 | 464 | 463 | 441 |
| | (c) Oil & Fats | 307 | 305 | 303 | 313 | 316 | 299 | 340 | 330 | 274 | 286 | 281 |
| | (d) Meat, Fish & Eggs | 559 | 547 | 543 | 452 | 591 | 506 | 457 | 549 | 764 | 645 | 522 |
| | (e) Milk & Products | 385 | 329 | 409 | 390 | 412 | 420 | 369 | 423 | 356 | 418 | 360 |
| | (f) Condiments & Spices | 405 | 488 | 583 | 556 | 407 | 491 | 478 | 430 | 457 | 539 | 491 |
| | (g) Vegetables & Fruits | 571 | 404 | 506 | 569 | 426 | 504 | 510 | 556 | 420 | 401 | 520 |
| | (h) Other Food | 393 | 487 | 418 | 468 | 392 | 351 | 409 | 340 | 356 | 403 | 430 |
| | **FOOD GROUP INDEX** | **462** | **484** | **507** | **485** | **463** | **441** | **450** | **490** | **460** | **475** | **462** |
| II. | Pan, Supari, Tobacco & Intoxicants | 443 | 520 | 518 | 364 | 367 | 641 | 450 | 343 | 287 | 489 | 521 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|---|
| III. | Fuel & Light | 408 | 370 | 379 | 515 | 464 | 387 | 365 | 382 | 336 | 619 | 320 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 274 | 268 | 231 | 388 | 331 | 298 | 428 | 489 | 242 | 545 | 214 |
| VI. | **MISCELLANEOUS:** (a) Medical Care | 663 | 794 | 385 | 423 | 253 | 253 | 450 | 458 | 321 | 487 | 242 |
| | (b) Education, Recreation & Amusement | 476 | 438 | 803 | 273 | 441 | 562 | 362 | 353 | 622 | 514 | 543 |
| | (c) Transport & Communication | 416 | 498 | 409 | 397 | 598 | 439 | 453 | 569 | 464 | 393 | 472 |
| | (d) Personal Care & effects | 309 | 313 | 315 | 328 | 343 | 292 | 334 | 321 | 357 | 299 | 301 |
| | (e) Others Miscellaneous Group | 394<br>442 | 375<br>423 | 367<br>439 | 492<br>386 | 363<br>381 | 296<br>356 | 322<br>369 | 272<br>333 | 280<br>396 | 465<br>422 | 278<br>346 |
| | **GENERAL INDEX** | **398** | **401** | **414** | **419** | **385** | **370** | **389** | **403** | **384** | **443** | **344** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

For Director.

**Government of India,**

**Ministry of Labour**

**Labour Bureau**

**No. 112/1(KTK)/2006-NCPI**

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: December, 08

| Group/Sub-group/ Centre | Bangalore | Belgaum | Hubli-Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **I A:FOOD:** | | | | | |
| (a) Cereals & Products | 179 | 166 | 177 | 155 | 169 |
| (b) Pulses & Products | 156 | 163 | 166 | 142 | 154 |
| (c) Oils & Fats | 179 | 175 | 164 | 187 | 168 |
| (d) Meat, Fish & Eggs | 179 | 182 | 192 | 169 | 181 |
| (e) Milk & Products | 147 | 138 | 119 | 142 | 151 |
| (f) Condiments & Spices | 182 | 143 | 162 | 153 | 169 |
| (g) Vegetables & Fruits | 160 | 174 | 163 | 158 | 164 |
| (h) Other Food | 168 | 146 | 148 | 158 | 151 |

| 1 | 2 | 3 | 4 | 5 | 6 |
|---|---|---|---|---|---|
| **FOOD GROUP** | 169 | 160 | 162 | 157 | 162 |
| I-Pan, Supari, Tobacco & Intoxicants | 162 | 138 | 142 | 125 | 152 |
| II-Fuel & Light | 130 | 140 | 138 | 105 | 143 |
| III-Housing Index | 150 | 123 | 145 | 105 | 133 |
| IV-Clothing, Bedding & Footwear | 109 | 117 | 112 | 121 | 114 |
| **V-Miscellaneous:** | | | | | |
| (a) Medical Care | 161 | 156 | 140 | 155 | 142 |
| (b) Education, Recreation & Amusement | 140 | 140 | 155 | 146 | 120 |
| (c) Transport & Communication | 195 | 184 | 184 | 158 | 171 |
| (d) Personal Care & effects | 155 | 137 | 140 | 138 | 138 |
| (e) Others | 159 | 136 | 140 | 169 | 167 |
| Miscellaneous Group | 165 | 152 | 152 | 149 | 145 |
| **GENERAL INDEX** | **158** | **150** | **153** | **142** | **150** |

**HARITA SABHARWAL**

PR-158 DEPUTY DIRECTOR.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಕಾಅಕೊ/ ಕಾನಪ/ ಮ.ಪ್ರ/ ಸಂಖ್ಯೆ:73, 2007, ದಿನಾಂಕ:11ನೇ ಫೆಬ್ರವರಿ, 2009**

**ಅರ್ಜಿದಾರರು:**

ಅಯ್ಯಮ್ಮ ಗಂಡ ಹುಸೇನಪ್ಪ
ವಾಸ: ಕಾರಟಗಿ, ತಾ: ಗಂಗಾವತಿ.

**ಪ್ರತಿವಾದಿಗಳು:**

1) ಶಂಕರಗೌಡ ತಂದೆ ರಾಜಶೇಖರಪ್ಪ ಲಾರಿ ಮಾಲೀಕರು ಸಾ: ಅಮರಾವತಿ ತಾ: ಮಾನವಿ ಜಿ: ರಾಯಚೂರು.
2) ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ರಾಯಚೂರು.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ: ಶ್ರೀ/ಶ್ರೀಮತಿ ಹುಸೇನಪ್ಪ ತಂದೆ ಹನುಮಂತ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:13.05.2007 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಹುಸೇನಪ್ಪ ತಂದೆ ಹನುಮಂತ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಅಯ್ಯಮ್ಮ ಗಂಡ ಹುಸೇನಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಕಾಅಕೊ/ ಕಾನಪ/ ಮ.ಪ್ರ/ ಸಂಖ್ಯೆ:74, 2007, ದಿನಾಂಕ:11ನೇ ಫೆಬ್ರವರಿ, 2009**

**ಅರ್ಜಿದಾರರು:**

ದುರ್ಗಮ್ಮ ಗಂಡ ಶಂಕ್ರಪ್ಪ

ವಾಸ: ಕಾರಟಗಿ, ತಾ: ಗಂಗಾವತಿ.

**ಪ್ರತಿವಾದಿಗಳು:**

1) ಶಂಕರಗೌಡ ತಂದೆ ರಾಜಶೇಖರಪ್ಪ ಲಾರಿ ಮಾಲೀಕರು ಸಾ: ಅಮರಾವತಿ ತಾ: ಮಾನವಿ ಜಿ: ರಾಯಚೂರು.

2) ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ರಾಯಚೂರು.

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ: ಶ್ರೀ/ಶ್ರೀಮತಿ ಶಂಕ್ರಪ್ಪ ತಂದೆ ನಾಗಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:13.05.2007 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಶಂಕ್ರಪ್ಪ ತಂದೆ ನಿಂಗಪ್ಪ ಇವರ ವಾರಸುದಾರರಾದ ಶ್ರೀ/ಶ್ರೀಮತಿ ದುರ್ಗಮ್ಮ ಗಂಡ ಶಂಕ್ರಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.168

**ಜಲ ಸಂಪನ್ಮೂಲ ಇಲಾಖೆ (ಸ.ನೀ.)**

**ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉ) ವಲಯ ವಿಜಾಪುರ**

**ಅಧಿಸೂಚನೆ**

**ಕ್ರ.ಸಂ. ಮುಇಂ/ಸನೀ(ಉ)ವ/ಬಿಜೆಪಿ/ಮಾಹ/ಸಿ–2/08–09/677, ದಿನಾಂಕ:3ನೇ ಫೆಬ್ರವರಿ, 2009**

ಈ ಕಛೇರಿಯಲ್ಲಿ ಶ್ರೀ ಎಸ್.ಆರ್. ಸೋಮನಗೌಡರ, ಉಪಮುಖ್ಯ ಇಂಜಿನೀಯರರು ಇವರಿಗೆ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಸರ್ಕಾರದ ಅಧಿಸೂಚನೆ ಸಂಖ್ಯೆ: ಸನೀಇ/5/ಸೇಎಸು/ 2009/ ದಿನಾಂಕ:13.01.2009 ರನ್ವಯ ಶ್ರೀ ಆರ್.ಬಿ. ಪಾಟೀಲ ಇವರನ್ನು ಉಪ ಮುಖ್ಯ ಇಂಜಿನೀಯರ ಹುದ್ದೆಗೆ ವರ್ಗಾವಣೆಯ ಮೇರೆಗೆ ಸ್ಥಳ ನಿಯುಕ್ತಿಗೊಳಿಸಿದ್ದು, ಇವರು ದಿನಾಂಕ:21.01.2009ರ ಅಪರಾಹ್ನದಂದು ಪ್ರಭಾರವನ್ನು ವಹಿಸಿಕೊಂಡ ಪ್ರಯುಕ್ತವಾಗಿ ಈ ಕಾರ್ಯಾಲಯದಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ಮಾಹಿತಿ ಹಕ್ಕು ಅಧಿನಿಯಮ–2005 ರಡಿಯಲ್ಲಿ ಸೆಕ್ಷನ್ 5(1) ರನ್ವಯ ಈ ಕೆಳಗಿನಂತೆ ಅಧಿಸೂಚನೆ ಹೊರಡಿಸಲಾಗಿದೆ.

| ಕ್ರ. ಸಂ. | ಕಛೇರಿಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) |
|---|---|---|
| 1. | ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ವಿಜಾಪುರ. | ಶ್ರೀ ಆರ್.ಬಿ. ಪಾಟೀಲ, ಉಪ ಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ ವಿಜಾಪುರ. |

**ಸಿ. ಮೋಹನ**
ಮುಖ್ಯ ಇಂಜಿನೀಯರರು,
ಸಣ್ಣ ನೀರಾವರಿ (ಉ) ವಲಯ,
ವಿಜಾಪುರ.

ಪಿ.ಆರ್.173

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560029**

**ಪ್ರಕರಣ ಸಂಖ್ಯೆ: ಸಿಡಬ್ಲ್ಯೂಸಿ: ಎಫ್‌ಸಿ/ಸಿಆರ್–2/09, ದಿನಾಂಕ:7ನೇ ಫೆಬ್ರವರಿ, 2009**

**ಅರ್ಜಿದಾರರು:** **ಪ್ರತಿವಾದಿಗಳು:**

ಶ್ರೀಮತಿ ನಾಗಮ್ಮ ಲೇಟ್ ಕೋಂ ನರಸಿಂಹಯ್ಯ, ನಂ.214 ಎಫ್.ಎಫ್. ಲೇಔಟ್, ಲಗ್ಗೆರೆ, ಬೆಂಗಳೂರು–58.

ಚೇರ್‌ಮನ್ ಮೆ: ಬೆಂಗಳೂರು ನೀರು ಸರಬರಾಜು & ಒಳಚರಂಡಿ ಮಂಡಳಿ, ಕಾವೇರಿಭವನ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ನಾಗಮ್ಮ ಲೇಟ್ ನರಸಿಂಹಯ್ಯ, ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ನರಸಿಂಹಯ್ಯ ಇವರು ಪ್ರತಿವಾದಿ 1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಭಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–3, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ–3, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು–560029**

**ಪ್ರಕರಣ ಸಂಖ್ಯೆ: ಸಿಡಬ್ಲ್ಯೂಸಿ: ಎಫ್‌ಸಿ/ಸಿಆರ್–3/09, ದಿನಾಂಕ:7ನೇ ಫೆಬ್ರವರಿ, 2009**

**ಅರ್ಜಿದಾರರು:** **ಪ್ರತಿವಾದಿಗಳು:**

ಶ್ರೀ ಗುಂಡಪ್ಪ
ಸಾ: ಗುಡದನಾಳ, ಲಿಂಗಸಗೂರು ತಾಲ್ಲೂಕು.

ಚೇರ್‌ಮನ್ ಮೆ: ಬೆಂಗಳೂರು ನೀರು ಸರಬರಾಜು & ಒಳಚರಂಡಿ ಮಂಡಳಿ, ಕಾವೇರಿಭವನ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಗುಂಡಪ್ಪ ಸಾ॥ ಗುಡದನಾಳ ತಾ:ಲಿಂಗಸಗೂರು ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಅಮರೇಶ ಇವರು ಪ್ರತಿವಾದಿ 1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಭಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಭಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–3, ಬೆಂಗಳೂರು.

ಪಿ.ಆರ್.150

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ರಾಮನಗರ ಜಿಲ್ಲೆ, ರಾಮನಗರ**

**ಪ್ರಕರಣ ಸಂಖ್ಯೆ: ಕಾಅರಾ/ ಕಾನಪ/ ಮರಣ/ ಸಿಆರ್–12/2009, ದಿನಾಂಕ:31ನೇ ಜನವರಿ, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಸೀತಾ ಕೋಂ ಲೇಟ್ ರಮೇಶ್ ಮೋತಿ, ಒಸೆರಾಜ್, ಉರ್ದ ತಾಲ್ಲೂಕು, ಬಿಲ್‌ವಾರಾ ಜಿಲ್ಲೆ, ರಾಜಸ್ಥಾನ ರಾಜ್ಯ. | **ವಿರುದ್ಧ** | 1) ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬೆಂಗಳೂರು ಡಿವಿಜನಲ್ ಆಫೀಸ್–1, 3ನೇ ಫ್ಲೋರ್, ಯೂನಿಟಿ ಬಿಲ್ಡಿಂಗ್ ಅನೆಕ್ಸ್, ನಂ.72, ಮಿಷನ್ ರೋಡ್, ಬೆಂಗಳೂರು–560 027.<br>2) ಪಾಲುದಾರರು, ವಿಷ್ಣು ಸ್ಟೋನ್ ಕ್ರಷರ್ಸ್, ನಂ.137, 2ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು. |

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:31.01.2009 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ಪತಿ ಇವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**
ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರವರ ನ್ಯಾಯಾಲಯ,
ರಾಮನಗರ ಜಿಲ್ಲೆ, ರಾಮನಗರ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ರಾಮನಗರ ಜಿಲ್ಲೆ, ರಾಮನಗರ**

**ಪ್ರಕರಣ ಸಂಖ್ಯೆ: ಕಾಅರಾ/ ಕಾನಪ/ ಮರಣ/ ಸಿಆರ್–106/2008, ದಿನಾಂಕ:2ನೇ ಜನವರಿ, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀ ಎಂ.ಪಿ.ಸಿ. ನಾಗರಾಜು ಬಿನ್ ಲೇಟ್ ಚೂಡೇಗೌಡ @ ಬಕ್ಕೇಗೌಡ.<br>2) ಶ್ರೀಮತಿ ಲಕ್ಷ್ಮಮ್ಮ ಕೋಂ ಲೇಟ್ ಚೂಡೇಗೌಡ @ ಬಕ್ಕೇಗೌಡ, ಮನೆ ನಂ.156, ಮಾರುತಿನಗರ, ಕಾಮಾಕ್ಷಿಪಾಳ್ಯ, ಬೆಂಗಳೂರು. | **ವಿರುದ್ಧ** | 1) ಶ್ರೀ ರವಿಕುಮಾರ್ ಬಿನ್ ಗಂಗಾಧರ್, ನಂ.366, 9ನೇ ಮೇನ್, 2ನೇ ಕ್ರಾಸ್, ವಿಜಯನಗರ, ಬೆಂಗಳೂರು–560040.<br>2) ಬಜಾಜ್ ಅಲಿಯಾನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., 105 ಎ/107ಎ. ಸೀಯರ್ಸ್ ಪ್ಲಾಜಾ, 136, ರೆಸಿಡೆನ್ಸಿ ರಸ್ತೆ, ಬೆಂಗಳೂರು–560 025. |

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:02.01.2008 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಅರ್ಜಿದಾರರ ತಂದೆ ಲೇಟ್ ಚೂಡೇಗೌಡ @ ಬಕ್ಕೇಗೌಡ, ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು"

ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು, ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**

ಪಿ.ಆರ್.151

ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರವರ ನ್ಯಾಯಾಲಯ,
ರಾಮನಗರ ಜಿಲ್ಲೆ, ರಾಮನಗರ.

## ಶಿಕ್ಷಣ ಇಲಾಖೆ

## ಅಪರ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ

**ವಿಷಯ:** ಶ್ರೀ ಎಂ.ಎಸ್. ಭೀಮನಗರ ಹಿಂದಿನ ಮುಖ್ಯ ಶಿಕ್ಷಕರು ಸ ಪ್ರೌ ಶಾಲೆ ಹಿರೇಕೊಪ್ಪ ತಾ.ನರಗುಂದ ಹಾಲಿ ಮುಖ್ಯ ಶಿಕ್ಷಕರು ಹಾಗೂ ಪದನಿಮಿತ್ತ ಸಹಾಯಕ ಶಿಕ್ಷಣಾಧಿಕಾರಿ ಸಮೂಹ ಸಂಪನ್ಮೂಲ ಕೇಂದ್ರ ನಾದ ಕೆ.ಡಿ. ತಾ. ಇಂಡಿ ಜಿ.ಬಿಜಾಪುರ ಇವರ ಮೇಲಿನ ಆರೋಪಗಳಲ್ಲಿ ಶಿಸ್ತು ಕ್ರಮದ ಅಂತಿಮ ಆದೇಶ.

**ಉಲ್ಲೇಖ:** 1) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಜ್ಞಾಪನ ಸಂಖ್ಯೆ:ಸಿ2(4) ದೂರು: 06:2005–06, ದಿನಾಂಕ:22.09.2005.

2) ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಎಂ.ಎಸ್. ಭೀಮನಗರ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ:03.11.2005.

3) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಜ್ಞಾಪನ ಸಂಖ್ಯೆ: ಸಿ2 (4) ದೂರು:06:2005–06 ದಿನಾಂಕ:11.10.2006.

4) ಶ್ರೀ ಎಂ.ವಿ. ಶೀಲವಂತ ವಿಚಾರಣಾಧಿಕಾರಿಯವರ ವರದಿ ದಿನಾಂಕ:07.05.2008.

5) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಎರಡನೇ ನೋಟಿಸ್ ದಿನಾಂಕ:06.06.2008.

6) ಶ್ರೀ ಎಂ.ಎಸ್. ಭೀಮನಗರ ಇವರ ರಕ್ಷಣಾ ಹೇಳಿಕೆ ದಿನಾಂಕ:28.06.2008.

7) ಮುಖ್ಯ ಲೆಕ್ಕಾಧಿಕಾರಿಗಳು ಅಪರ ಆಯುಕ್ತರ ಕಛೇರಿ ಸಾ.ಶಿ.ಇ. ಧಾರವಾಡ ಇವರ ವರದಿ ದಿನಾಂಕ:02.01.2009 ಮತ್ತು 27.01.2009.

8) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001, ಬೆಂಗಳೂರು ದಿನಾಂಕ:14.09.2001.

9) ಆಯುಕ್ತರ ಕಛೇರಿ, ಸಾ.ಶಿ.ಇ. ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ2(4) ದೂರು 06/2005–06 ದಿನಾಂಕ:14.07.2008.

10) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 12 ಎಸ್‌ಡಿಇ 2007 ಬೆಂಗಳೂರು ದಿನಾಂಕ:29.01.2008 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಇಡಿ 250 ಡಿಪಿಐ 2006 ದಿನಾಂಕ:22.02.2008.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ಭೀಮನಗರ, ಹಿಂದಿನ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಹಿರೇಕೊಪ್ಪ ತಾ.ನರಗುಂದ ಇವರು ಅಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದರೆನ್ನಲಾದ ಹಣಕಾಸಿನ ಹಾಗೂ ಅಧಿಕಾರ ದುರುಪಯೋಗ, ದುರ್ನಡತೆ, ಆರೋಪಗಳ ಕುರಿತು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಗಳು (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 11ರಡಿ ಶಿಸ್ತು ಕ್ರಮ ಜರುಗಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕ್ರಮ ಕೈಗೊಂಡಿದ್ದರು.

ಸದರಿಯವರ ವಿರುದ್ಧದ ಆಪಾದನೆಗಳಲ್ಲಿ ವಿಚಾರಣಾಧಿಕಾರಿಗಳು ದಿನಾಂಕ:07.05.2008ರಂದು ವಿಚಾರಣೆ ವರದಿಯನ್ನು ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯನ್ನು ಆರೋಪಿತ ಅಧಿಕಾರಿಗೆ ದಿನಾಂಕ:06.06.2008ರ 2ನೇ ನೋಟೀಸಿನ ಮೂಲಕ ನೀಡಿ, ವಿಚಾರಣೆಯಲ್ಲಿ ಸಾಬೀತಾಗಿದೆ ಎಂದು ಕಂಡು ಬಂದಿರುವ ಆರೋಪಗಳ ಕುರಿತು ಲಿಖಿತ ರಕ್ಷಣಾ ಹೇಳಿಕೆಯನ್ನು ನೋಟೀಸು ತಲುಪಿದ 15 ದಿನದೊಳಗಾಗಿ ನೀಡುವಂತೆ ತಿಳಿಸಿದ್ದಾರೆ. ಅದರಂತೆ ನಿಗದಿತ ಅವಧಿಯೊಳಗೆ ಸದರಿ ಆಪಾದಿತ ನೌಕರರು ತಮ್ಮ ಹೇಳಿಕೆಯನ್ನು ಸಲ್ಲಿಸಿದ್ದಾರೆ. ಈಗ ಸದರಿ ಆಪಾದಿತ ಅಧಿಕಾರಿಯು ಈ

ಕಾರ್ಯಾಲಯದ ಅಧಿಕಾರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಈ ಕಛೇರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಅಂತಿಮ ಆದೇಶ ಹೊರಡಿಸಲು ಮೂಲ ದಾಖಲೆಗಳೊಂದಿಗೆ ಪ್ರಕರಣವನ್ನು ಈ ಕಛೇರಿಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಹಸ್ತಾಂತರಿಸಿದ್ದಾರೆ.

ಸದರಿ ಪ್ರಕರಣದಲ್ಲಿಯ ಎಲ್ಲ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಹಾಗೂ ಆಪಾದಿತ ನೌಕರರು ವಿಚಾರಣಾ ವರದಿಗೆ ಸಂಬಂಧಿಸಿದಂತೆ ನೀಡಲಾದ ಹೇಳಿಕೆಯನ್ನು ಕೂಡ ಗಮನಿಸಲಾಗಿದೆ.

ಆಪಾದಿತರ ವಿರುದ್ಧ ಒಟ್ಟು 4 ಆಪಾದನೆಗಳು ಇವೆ.

**ಆರೋಪ–1:**

2002–03ನೇ ಸಾಲಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ನರಗುಂದ ಶಾಖೆಯಿಂದ ಆಪಾದಿತ ಅಧಿಕಾರಿಯು ರೂ.50,824/–ನ್ನು ಸೆಲ್ಫ್ ಚೆಕ್ ಮೂಲಕ ಡ್ರಾ ಮಾಡಿ ಸದರೀ ಹಣವನ್ನು ಅಭಿವೃದ್ಧಿ ಕಾರ್ಯಗಳಿಗೆ ಬಳಸದೇ ಮತ್ತು ಅಗತ್ಯ ದಾಖಲೆಗಳನ್ನು ನಿರ್ವಹಿಸದೇ ಸದರಿ ಮೊತ್ತವನ್ನು ದಿನಾಂಕ:28.06.2008ರಂದು ಮರಳಿ ಎಸ್.ಬಿ.ಐ. ಖಾತೆಗೆ ಭರಣ ಮಾಡಿರುತ್ತಾರೆ. ಅಂದರೆ ಸುಮಾರು 5 ವರ್ಷ 3 ತಿಂಗಳವರೆಗೆ ಸದರಿ ಮೊತ್ತವನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡು ದುರ್ನಡತೆ ಎಸಗಿರುವುದು.

**ಆರೋಪ–2:**

ಆಪಾದಿತ ನೌಕರರು ದಿನಾಂಕ:05.07.2003 ರಿಂದ 14.07.2003 ರವರೆಗೆ ಶಾಲೆಗೆ ಅನಧಿಕೃತವಾಗಿ ಗೈರು ಹಾಜರು ಉಳಿದು ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿಸಿರುವ ಬಗ್ಗೆ.

**ಆರೋಪ–3:**

ಆಪಾದಿತ ಅಧಿಕಾರಿಯು 1992–93 ರಿಂದ 2002–03ನೇ ಅವಧಿಯವರೆಗೆ ಶಾಲೆಗೆ ಸಂಬಂಧಿಸಿದ ಮೊತ್ತವನ್ನು ಹಲವಾರು ಬಾರಿ ಬ್ಯಾಂಕಿನಿಂದ ಡ್ರಾ ಮಾಡಿದ್ದು ಸದರಿ ಡ್ರಾ ಮಾಡಿದ ಮೊತ್ತಕ್ಕೆ ಯಾವುದೇ ಲೆಕ್ಕ ಪತ್ರ ನಿಯಮಾನುಸಾರ ನಿರ್ವಹಿಸದೇ ಹಾಗೂ ಈ ಕುರಿತು ಕ್ಯಾಶ್ ಬುಕ್ ಬರೆಯದೇ ಹಣವನ್ನು ದುರುಪಯೋಗಪಡಿಸಿಕೊಂಡಿದ್ದು ಇರುತ್ತದೆ. ಹೀಗೆ ದುರುಪಯೋಗವಾದ ಮೊತ್ತ ರೂ.1,36,138/– ಆಗಿರುತ್ತದೆ.

**ಆರೋಪ–4:**

ಸದರಿ ಆಪಾದಿತ ಅಧಿಕಾರಿ 1990–91 ರಿಂದ 2003–04ನೇ ಸಾಲಿನವರೆಗೆ ಒಟ್ಟು ರೂ.72,656/– ನ್ನು ವಿದ್ಯಾರ್ಥಿಗಳಿಂದ ಸಂಗ್ರಹಿಸಿದ್ದು ಈ ಮೊತ್ತಕ್ಕೆ ಸಂಬಂಧಿಸಿದಂತೆ ವಿದ್ಯಾರ್ಥಿಗಳಿಗೆ ರಸೀದಿ ನೀಡಿರುವುದಿಲ್ಲ. ಹಾಗೂ ಸದರಿ ಮೊತ್ತವನ್ನು ಬ್ಯಾಂಕ್ ಖಾತೆಗೆ ಜಮಾ ಮಾಡಿ ನಂತರ ಡ್ರಾ ಮಾಡಿದ್ದು ಈ ಮೊತ್ತವನ್ನು ವೆಚ್ಚ ಮಾಡಿದ ಬಾಬತ್ತು ಯಾವುದೇ ದಾಖಲೆಗಳನ್ನು ನಿರ್ವಹಿಸದೇ ಹಣಕಾಸಿನ ದುರುಪಯೋಗ ಮಾಡಿದ್ದು ಇರುತ್ತದೆ.

ಸದರಿ ಆಪಾದನೆಗಳ ಕುರಿತು ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ಸದರಿಯವರು ತಮ್ಮ ವರದಿಯಲ್ಲಿ ಆಪಾದಿತರ ಮೇಲೆ ಹೊರಿಸಲಾದ ಆಪಾದನೆಗೆ ಸಂಬಂಧಿಸಿದಂತೆ ಆಪಾದಿತ ನೌಕರರು ದುರುಪಯೋಗಪಡಿಸಿಕೊಂಡ ಮೊತ್ತಕ್ಕೆ ಯಾವುದೇ ಸೂಕ್ತ ದಾಖಲೆಗಳನ್ನು ವಿಚಾರಣಾ ಕಾಲಕ್ಕೆ ಹಾಜರುಪಡಿಸಿರುವುದಿಲ್ಲ. ಮತ್ತು ಹಣಕಾಸಿನ ನಿರ್ವಹಣೆಗೆ ಸಂಬಂಧಿಸಿದ ಕ್ಯಾಶ್ ಪುಸ್ತಕ ಕೂಡ ನಿರ್ವಹಿಸಿರುವುದಿಲ್ಲ. ಹೀಗಾಗಿ ಲಭ್ಯ ಇದ್ದ ದಾಖಲೆಗಳ ಆಧಾರದ ಮೇಲೆ ವಿಚಾರಣಾಧಿಕಾರಿಗಳು ಆಪಾದಿತ ಅಧಿಕಾರಿಗಳ ವಿರುದ್ಧ ಮಾಡಲಾದ ಆಪಾದನೆಗಳು ಸ್ಥಿರಪಟ್ಟಿವೆ ಎಂದು ವರದಿ ಸಲ್ಲಿಸಿದ್ದಾರೆ. ಸದರಿ ವರದಿಯನ್ನು ಆಪಾದಿತ ನೌಕರರ ಮೇಲೆ ಜಾರಿ ಮಾಡಲಾಗಿದೆ. ಆ ಕುರಿತು ಅವರು ನೀಡಿರುವ ಹೇಳಿಕೆಯನ್ನು ಆಧರಿಸಿ ದುರುಪಯೋಗ ಆದ ಮೊತ್ತದ ಬಗ್ಗೆ ಈ ಕಛೇರಿಯ ಮುಖ್ಯಲೆಕ್ಕಾಧಿಕಾರಿಗಳಿಂದ ಪುನಃ ಪರಿಶೀಲನೆಯನ್ನು ಮಾಡಿಸಲಾಗಿದೆ ಹಾಗೂ ಪರಿಶೀಲನೆ ವೇಳೆಗೆ ಆಪಾದಿತ ನೌಕರರು ಕೂಡ ಹಾಜರಿದ್ದು, ದುರುಪಯೋಗವಾದ ಮೊತ್ತಕ್ಕೆ ಸಂಬಂಧಿಸಿದ ಶಾಲೆಯ ಕೆಲವು ದಾಖಲೆಗಳನ್ನು ಹಾಗೂ ರಸೀದಿ, ಬ್ಯಾಂಕ್ ಪಾಸ್ ಬುಕ್‌ಗಳನ್ನು ಪರಿಶೀಲನೆಗೆ ಹಾಜರುಪಡಿಸಿದ್ದಾರೆ. ಆ ಪ್ರಕಾರ ಅವುಗಳನ್ನು ಪರಿಶೀಲನೆ ಮಾಡಿ, ಆಪಾದನೆಗೆ ಸಂಬಂಧಪಟ್ಟ ತಮ್ಮ ವರದಿಯನ್ನು ಸಲ್ಲಿಸಿದ್ದಾರೆ. ಸದರಿಯವರ ವರದಿಯನ್ನು ಪರಿಶೀಲಿಸಿದಾಗ ಈ ಕೆಳಗಿನ ಅಂಶಗಳು ಕಂಡುಬಂದಿರುತ್ತವೆ.

1) ಆರೋಪ 1ಕ್ಕೆ ಸಂಬಂಧಿಸಿದಂತೆ ಆಪಾದಿತ ಅಧಿಕಾರಿ ದುರುಪಯೋಗಪಡಿಸಿಕೊಂಡರೆಂದು ಹೇಳಲಾದ ರೂ.50,824/–ನ್ನು ಮರಳಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಖಾತೆಗೆ ದಿನಾಂಕ:25.06.2008ರಂದು ಭರಣಾ ಮಾಡಿರುತ್ತಾರೆ. ಅಂದರೆ ಅವರು ಹಣ ತೆಗೆದ ಸುಮಾರು 5 ವರ್ಷ 3 ತಿಂಗಳ ನಂತರ ಹಣ ಭರಣ ಮಾಡಿರುತ್ತಾರೆ. ಆದ್ದರಿಂದ ಇದು ಸರ್ಕಾರದ ಹಣದ ತಾತ್ಕಾಲಿಕ ದುರುಪಯೋಗ ಎಂದು ಪರಿಗಣಿಸಲಾಗಿದೆ. ಆದ್ದರಿಂದ ಸುಮಾರು 5 ವರ್ಷ 3 ತಿಂಗಳು ಅವಧಿಗೆ ದುರುಪಯೋಗ ಮಾಡಿದ ಮೊತ್ತಕ್ಕೆ ಆಪಾದಿತ ನೌಕರರಿಂದ ಶೇಕಡಾ 12ರಂತೆ ಬಡ್ಡಿ ವಸೂಲು

ಮಾಡಬಹುದಾಗಿದೆ. ಅದರಂತೆ ಈ ಬಡ್ಡಿ ಮೊತ್ತ ರೂ.32,020/– ಗಳಷ್ಟು ಆಗುತ್ತದೆ. ಆದ್ದರಿಂದ ಸದರಿ ಹಣವನ್ನು ಆಪಾದಿತ ನೌಕರರಿಂದ ವಸೂಲು ಮಾಡಲು ಆದೇಶಿಸಲಾಗಿದೆ.

2) ಆರೋಪ 2ಕ್ಕೆ ಸಂಬಂಧಿಸಿದಂತೆ ಆಪಾದಿತ ನೌಕರರು ಅನಧಿಕೃತವಾಗಿ ಶಾಲೆಗೆ ಗೈರು ಉಳಿದಿರುವುದು ವಿಚಾರಣೆಯಲ್ಲಿ ದೃಢಪಟ್ಟಿದೆ.

3) ಆರೋಪ 3ಕ್ಕೆ ಸಂಬಂಧಿಸಿದಂತೆ ಆಪಾದಿತ ನೌಕರರು ಒಟ್ಟು ರೂ.1,36,138/–ಗಳನ್ನು ದುರುಪಯೋಗಪಡಿಸಿಕೊಂಡು, ಸದರಿ ಮೊತ್ತಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳನ್ನು ನಿರ್ವಹಿಸದೇ ಇರುವುದು ಕಂಡು ಬಂದಿರುತ್ತದೆ. ಆದರೆ ಈ ಕಛೇರಿಯ ಮುಖ್ಯಲೆಕ್ಕಾಧಿಕಾರಿಗಳ ಮರುಪರಿಶೀಲನೆಯಿಂದ, ಒಟ್ಟು ಜಮಾ ಆದ ರೂ.2,43,426/– ಗಳಲ್ಲಿ ರೂ.1,66,159/– ಬಗ್ಗೆ ರಸೀದಿ ಮತ್ತು ಇತರ ಹಣ ಜಮಾ ಮಾಡಿದ ಬಗ್ಗೆ ವಿವರಗಳು ಲಭ್ಯ ಆಗಿದ್ದು ಬಾಕಿ ಉಳಿದ ರೂ.74,564/– ಬಗ್ಗೆ ಮಾತ್ರ ಯಾವುದೇ ವಿವರಗಳು ಲಭ್ಯ ಆಗಿರುವುದಿಲ್ಲ ಹಾಗೂ ಈ ಕುರಿತು ಯಾವುದೇ ವಿವರಗಳನ್ನು ಆಪಾದಿತ ನೌಕರರು ಒದಗಿಸಿರುವುದಿಲ್ಲ. ಹಾಗೂ ಕ್ಯಾಶ್ ಬುಕ್ ನಿರ್ವಹಿಸಿರುವುದಿಲ್ಲ. ಆದ್ದರಿಂದ ರೂ.74,564/– ನ್ನು ಆಪಾದಿತ ನೌಕರರಿಂದ ವಸೂಲು ಮಾಡಬೇಕಾಗುತ್ತದೆ.

4) ಆರೋಪ 4ಕ್ಕೆ ಸಂಬಂಧಿಸಿದಂತೆ, ಸದರಿ ಆಪಾದನೆಯಲ್ಲಿ ಒಳಗೊಂಡ ರೂ.72,656/–ರ ಬಗ್ಗೆ ಪರಿಶೀಲನೆ ಮಾಡಲಾಗಿ ಆಪಾದಿತ ನೌಕರರು ಆ ಮೊತ್ತದ ಪೈಕಿ ರೂ.53,075/– ಮೊತ್ತವನ್ನು ಡ್ರಾ ಮಾಡಿ, ಅದಕ್ಕೆ ಯಾವುದೇ ತರಹದ ರಸೀದಿ ವಿವರಗಳನ್ನು ಒದಗಿಸದೇ, ಕ್ಯಾಶ್ ಬುಕ್ ಬರೆಯದೇ ಸದರಿ ಮೊತ್ತವನ್ನು ದುರುಪಯೋಗಪಡಿಸಿಕೊಂಡಿದ್ದಾರೆ. ಆದ್ದರಿಂದ ರೂ.53,075/–ನ್ನು ವಸೂಲು ಮಾಡುವುದು ಅವಶ್ಯಕವಾಗಿದೆ.

ಮೇಲ್ಕಾಣಿಸಿದಂತೆ ಆಪಾದಿತ ಅಧಿಕಾರಿಯು ಎಲ್ಲ ನಿಯಮಾವಳಿಗಳನ್ನು ಉಲ್ಲಂಘಿಸಿ, ಶಾಲೆಗೆ ಸಂಬಂಧಪಟ್ಟಂತೆ ವಿದ್ಯಾರ್ಥಿಗಳಿಂದ ಹಾಗೂ ಸರ್ಕಾರದಿಂದ ಸ್ವೀಕರಿಸಲಾದ ಹಣಕಾಸಿನ ಬಗ್ಗೆ ಯಾವುದೇ ದಾಖಲೆಗಳನ್ನು ಹಾಗೂ ರಸೀದಿಗಳನ್ನು ನಿರ್ವಹಿಸದೇ ಸುಮಾರು 10 ವರ್ಷಗಳ ಕಾಲ ಕ್ಯಾಶ್ ಬುಕ್ ಬರೆಯದೇ ಹಣಕಾಸಿನ ವ್ಯವಹಾರ ನಿರ್ವಹಿಸಿರುವುದು ಕಂಡುಬರುತ್ತದೆ. ಶಾಲೆಯ ಮುಖ್ಯೋಪಾಧ್ಯಾಯರಾಗಿ ಸರ್ಕಾರದ ಹಣಕಾಸಿನ ಬಗ್ಗೆ ನಿಯಮಾವಳಿಗಳ ಪ್ರಕಾರ ಅಗತ್ಯ ದಾಖಲೆಗಳನ್ನು ಆಪಾದಿತ ಅಧಿಕಾರಿಗಳು ನಿರ್ವಹಿಸಿರುವುದಿಲ್ಲ. ಹಾಗೂ ಇದು ಹಣಕಾಸಿನ ದುರ್ಬಳಕೆ ಮಾಡುವ ಉದ್ದೇಶದಿಂದಲೇ ಎಸಗಿರುವ ಲೋಪವಾಗಿರುತ್ತದೆ. ಹಾಗೂ ಇದು ಒಬ್ಬ ಶಿಕ್ಷಕರಿಗೆ ತರವಲ್ಲದ ನಡವಳಿಕೆಯಾಗಿರುತ್ತದೆ.

ಉಲ್ಲೇಖ 8ರ ಸರ್ಕಾರದ ಆದೇಶದ ಕ್ರಮಸಂಖ್ಯೆ 5ರ ಪ್ರಕಾರ ಹಣಕಾಸಿನ ದುರುಪಯೋಗ ಗಂಭೀರ ವಿಷಯವಾಗಿದೆ. ಆಪಾದಿತ ಅಧಿಕಾರಿಗಳಿಗೆ ಕಠಿಣ ಶಿಕ್ಷೆಯನ್ನು ವಿಧಿಸುವ ಅಗತ್ಯ ಇರುತ್ತದೆ. ಆದ್ದರಿಂದ ಈ ಕೆಳಗಿನ ಆದೇಶ.

**ಆದೇಶ**

**ಸಂಖ್ಯೆ: ಸಿ4: ದೂರು:ಎಂಎಸಭೀ:ಮುಶಿ:ಹಿರೇ:40:2008–09/578, ದಿನಾಂಕ:28ನೇ ಜನವರಿ, 2009**

ಸರ್ಕಾರಿ ಆದೇಶ ಸಂಖ್ಯೆ: ಡಿ.ಪಿ.ಎ.ಆರ್. 12 ಎಸ್‌ಡಿಇ 2007, ಬೆಂಗಳೂರು ದಿನಾಂಕ:29.01.2008 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 250:ಡಿಪಿಐ 2006, ದಿನಾಂಕ:22.02.2008 ರಂತೆ ಪ್ರದತ್ತವಾದ ಅಧಿಕಾರದನ್ವಯ ವಿ.ಎ. ಮಾಚಕನೂರ ಕ.ಆ.ಸೇ. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಆದ ನಾನು ಶ್ರೀ ಎಂ.ಎಸ್. ಭೀಮನಗರ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ನಾದ ಕೆ.ಡಿ., ತಾಲ್ಲೂಕು: ಇಂಡಿ, ಜಿಲ್ಲೆ: ಬಿಜಾಪುರ ಇವರು ಈ ಹಿಂದೆ ಸರ್ಕಾರಿ ಪ್ರೌಢ ಶಾಲೆ ಹಿರೇಕೊಪ್ಪ ತಾ: ನರಗುಂದ, ಜಿಲ್ಲೆ: ಗದಗ ಇಲ್ಲಿ ಸೇವೆ ಸಲ್ಲಿಸುತ್ತಿರುವಾಗ ಮಾಡಲಾದ ಸರ್ಕಾರಿ ಹಣದ ದುರುಪಯೋಗ ಹಾಗೂ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿ ಉಳಿದು ಕರ್ತವ್ಯ ನಿರ್ಲಕ್ಷತೆ ತೋರಿದ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(VI)ರ ಮೇರೆಗೆ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸುವ ಶಿಕ್ಷೆಯನ್ನು ವಿಧಿಸಿ ಆದೇಶಿಸಲಾಗಿದೆ. ಹಾಗೂ ಸದರಿಯವರು ರೂ.50,824/–ಗಳನ್ನು ಸುಮಾರು 5 ವರ್ಷ 3 ತಿಂಗಳವರೆಗೆ ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡ ಬಗ್ಗೆ ಶೇಕಡಾ 12 ರಂತೆ ಬಡ್ಡಿ ಹಣ ರೂ.32020/– ಮತ್ತು ದುರುಪಯೋಗ ಮಾಡಿದ ಹಣ ರೂ.1,27,639/– ಅಂತೂ ರೂ.1,59,659/–ನ್ನು ಸದರಿ ನೌಕರರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಿ ಸರ್ಕಾರಕ್ಕೆ ಭರಣಾ ಮಾಡಲು ಆದೇಶಿಸಿದೆ.

ಅಪರ ಆಯುಕ್ತರು,
ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.

ಪಿ.ಆರ್.152

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್–14/08, ದಿನಾಂಕ:15ನೇ ಜನವರಿ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| ಶ್ರೀಮತಿ ಮಲ್ಲಿ ಕೋಂ ಮಂಜುನಾಥ ಮುಕ್ರೀ ಹಳಕುರು: ಕುಮಟಾ ಹಾಗೂ ಇನ್ನೂ ಮೂರು ಜನ. | V/s | ದಿ ಎಗ್ಸಿಕ್ಯೂಟಿವ್ ಇಂಜಿನೀಯರ್ ಒ & ಎಂ ಡಿವಿಜನ್ ಹೆಸ್ಕಂ, ಕಾರವಾರ. 2) ದಿ ಬ್ರಾಂಚ್ ಮ್ಯಾನೇಜರ್, ಚೋಲಮಂಡಲಂ M/s. ಜನರಲ್ ಇನ್ಸೂರನ್ಸ್ ಕಂ.ಲಿ., 77/l, 1ನೇ ಫ್ಲೋರ್, ಕಲಬುರ್ಗಿ, ಸೆಕ್ವೀರಾ ದೇಶಪಾಂಡೆನಗರ, ಹುಬ್ಬಳ್ಳಿ. |

**ಪ್ರಕಟಣೆ**

ಶ್ರೀ ಮಂಜುನಾಥ ಶಂಕರ ಮುಕ್ರೀ, ಗ್ಯಾಂಗ್‌ಮ್ಯಾನ್ ಅಂತಾ ಕೆಲಸ ಮಾಡುತ್ತಿದ್ದರು ಇವರ ಮರಣದ ಪ್ರಯುಕ್ತ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಮಂಜುನಾಥ ಶಂಕರ ಮುಕ್ರೀ ಇವರು ಪ್ರತಿವಾದಿಗಳಾದ ದಿ॥ ಎಕ್ಸಿಕ್ಯೂಟಿವ್ ಇಂಜಿನೀಯರ್ (Ele) O & M Division, ಹೆಸ್ಕಂ, ಕಾರವಾರ ಇವರಲ್ಲಿ (2) ದಿ ಬ್ರಾಂಚ್ ಮ್ಯಾನೇಜರ್ ಚೋಲಮಂಡಲಂ M/s. ಜನರಲ್ ಇನ್ಸೂರನ್ಸ್ ಕಂ.ಲಿ., ದೇಶಪಾಂಡೆನಗರ, ಹುಬ್ಬಳ್ಳಿ ಎಂದು ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧ ಸಂಬಂಧಪಟ್ಟವರಿಗೆ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆಯ ಮೂಲಕ ತಿಳಿಯಪಡಿಸುವುದೇನೆಂದರೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಇಲ್ಲವೇ ಬೇರೆ ಶಾಸನಬದ್ಧ ವಾರಸುದಾರರೆಂದು ಪರಿಗಣಿಸಬೇಕೆಂದು ಇಚ್ಛಿಸಿದ್ದಲ್ಲಿ ಅಂಥವರು ಈ ಪ್ರಕಟಣೆಯು ಪ್ರಕಟವಾದ 30 ದಿವಸಗಳೊಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ದೇವರಾಜು ಎಂ.ಎನ್.**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

ಪಿ.ಆರ್.153

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ:38:09/1834–35, ದಿನಾಂಕ:7ನೇ ಫೆಬ್ರವರಿ, 2009**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| 1) ಶ್ರೀಮತಿ ನುಜ್‌ಹತ್ ಗಂ: ಲೇಟ್ ಅಬುಬಾಕರ್ ಸಿದ್ದಿಕಿ, 26 ವರ್ಷ (ಹೆಂಡತಿ) 2) ಮೊಹಮ್ಮದ್ ಸೊಹೋಯಿಲ್ ತಂ: ಲೇಟ್ ಅಬುಬಾಕರ್, 08 ವರ್ಷ (ಮಗ) 3) ಮೊಹಮ್ಮದ್ ಗೌಸ್, ತಂ: ಲೇಟ್ ಅಬೂಬಾಕರ್, 06 ವರ್ಷ (ಮಗ) 4) ನಬೀಸಾಬ್ ತಂ: ಲೇಟ್ ಬುಡನ್‌ಸಾಬ್ 60 ವರ್ಷ (ಮೃತನ ತಂದೆ) 5) ಶ್ರೀಮತಿ ತಹರಾ ಬೇಗಂ ಗಂ: ನಬೀಸಾಬ್, 55 ವರ್ಷ (ಎಲ್ಲರ ವಾಸ: ಯಾಸೀಂಸಾಬ್ ಸ್ಟ್ರೀಟ್, ಉರ್ದು ಟಿಸಿಹೆಚ್ ಶಾಲೆ ಹಿಂದೆ, ಕೌಲ್‌ಬಜಾರ್. | **ವಿರುದ್ಧ** | 1) ಮೊಹಮ್ಮದ್ ಟಿಪ್ಪುಸುಲ್ತಾನ್, ತಂ: ನಬೀಸಾಬ್ ಎಸ್. ಲಾರಿ ಮಾಲೀಕರು, ಸಂಖ್ಯೆ: ಕೆಎ–34:8012, ಡೋರ್ ನಂ.124:02, 24ನೇ ವಾರ್ಡ್, ಕೌಲ್ ಬಜಾರ್, ಬಳ್ಳಾರಿ. 2) ಡಿವಿಜನಲ್ ಮ್ಯಾನೇಜರ್, ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

ಸದರಿ 1 ರಿಂದ 5ರ ವರೆಗಿನ ಅರ್ಜಿದಾರರುಗಳಾದ ಶ್ರೀಮತಿ ನುಜಹತ್ ಗಂ: ಲೇಟ್ ಅಬುಬಾಕರ್ (2) ಮೊಹಮ್ಮದ್ ಸೊಹೋಯಿಲ್ ತಂ: ಲೇಟ್ ಅಬೂಬಾಕರ್ (3) ಮೊಹಮ್ಮದ್ ಗೌಸ್ ತಂ: ಲೇಟ್ ಅಬೂಬಾಕರ್ (4) ನಬೀಸಾಬ್ ತಂ: ಲೇಟ್ ಬುಡನ್‌ಸಾಬ್ (5) ಶ್ರೀಮತಿ ತೆಹರಾ ಬೇಗಂ ಗಂ: ನಬೀಸಾಬ್ ಇವರುಗಳು ತಾವು ಮೃತನ ಹೆಂಡತಿ, ಮಕ್ಕಳು ಹಾಗೂ ತಂದೆ–ತಾಯಿಗಳಾಗಬೇಕೆಂದು ಹಾಗೂ ಶಾಸನಬದ್ಧ ವಾರಸುದಾರರು ಮತ್ತು ಅವಲಂಬಿತರೆಂದು ತಿಳಿಸುತ್ತಾ ಮೃತನು 1ನೇ ಪ್ರತಿವಾದಿಯವರಲ್ಲಿ ದಿನಾಂಕ:16.01.09ರಂದು ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಯಾಂತ್ರಿಕ ದೋಷದಿಂದ ವಾಹನ ಅಪಘಾತಕ್ಕೀಡಾಗಿ ತೀವ್ರತರದ ಗಾಯಗಳಿಂದ ವಿಮ್ಸ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಫಲಕಾರಿಯಾಗದೆ ಮರಣಹೊಂದಿರುತ್ತಾನೆಂದು ತಿಳಿಸುತ್ತಾ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಆದ್ದರಿಂದ ಮೃತನಿಗೆ ಸಂಬಂಧಿಸಿದ ಬೇರೆ ಯಾರಾದರೂ ವಾರಸುದಾರರಿದ್ದಲ್ಲಿ ಹಾಗೂ ಸಾರ್ವಜನಿಕರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಸಂಬಂಧವಾಗಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಕಿದ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.154

**ಸಹಕಾರ ಸಂಘಗಳ ಉಪ ನಿಬಂಧಕರು, ಬಿ.ಎಲ್.ಗೌಡ ಲೇಔಟ್, ಚಿತ್ರದುರ್ಗ ಇವರ ನ್ಯಾಯಾಲಯ**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ವ್ಯವಸ್ಥಾಪಕರು, ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನಿ., ಚಿತ್ರದುರ್ಗ. | **ವಿರುದ್ಧ** | ಶ್ರೀ ಸಾಯಿರಾಂಸಿಂಗ್, ಅಧೀಕ್ಷಕರು, ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನಿ. ಶಾಖೆ, ಎಸ್.ಸಿ.ಡಿ.ಸಿ.ಸಿ. ಬ್ಯಾಂಕು ನಿ., ಅಥಿತಿ ಗೃಹ ಕಟ್ಟಡ, 2ನೇ ಮಹಡಿ, ಕೆ.ಎಸ್. ರಾವ್ ರಸ್ತೆ, ಕೋಡಿಯಾಲ ಬೈಲು, ಮಂಗಳೂರು–575003. |

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103(2) ರನ್ವಯ ಎದುರು ಅರ್ಜಿದಾರರ ಪತ್ನಿ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಮಾಡಿಕೊಂಡಿರುವ ಬಗ್ಗೆ ಸ್ಥಿರೀಕರಿಸಿರುವ ಆದೇಶ**

ಅರ್ಜಿದಾರರು ಎದುರು ಅರ್ಜಿದಾರರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 69ರಡಿ ರೂ.10,15,449–00 ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳ ಸಮೇತ ಹಣ ವಸೂಲಿಗೆ ವಿವಾದ ಅರ್ಜಿಯನ್ನು ಹೂಡಿರುತ್ತಾರೆ. ಸದರಿ ಅರ್ಜಿಯನ್ನು ಅಧಿಭಾರ ಸಂಖ್ಯೆ 3/ 2007–08 ರಲ್ಲಿ ವಿಚಾರಣೆಗೆ ತೆಗೆದುಕೊಂಡಿದೆ. ಅರ್ಜಿದಾರರು ದಿನಾಂಕ: 20.12.2007ರಂದು ಕಲಂ 103 ರನ್ವಯ ಪ್ರಮಾಣೀಕರಿಸಿದ ಅರ್ಜಿ ಸಲ್ಲಿಸಿ, ಎದುರು ಅರ್ಜಿದಾರರ ಪತ್ನಿ ಶ್ರೀಮತಿ ಮಂಜುಳ ಸಾಯಿರಾಂ ಇವರ ಹೆಸರಿನಲ್ಲಿರುವ ಆಸ್ತಿ ಬಗ್ಗೆ ಉಪ ನೊಂದಣಾಧಿಕಾರಿ, ಮೈಸೂರು ದಕ್ಷಿಣ ಇವರು ನೀಡಿರುವ ಅಧಿಕೃತ ದಾಖಲೆಯಂತೆ ಮೈಸೂರು ಸಿಟಿ ವಿಜಯನಗರ 1ನೇ ಹಂತ 4ನೇ ಮುಖ್ಯ ರಸ್ತೆ, 4ನೇ ಕ್ರಾಸ್ ನಿವೇಶನದ ಸಂಖ್ಯೆ 328 ಅಳತೆ 12x18 ಮೀಟರ್‌ಗಳು ಚಕ್ಕುಬಂದಿ ಪೂರ್ವಕ್ಕೆ ನಿವೇಶನದ ಸಂಖ್ಯೆ:329, ಪಶ್ಚಿಮಕ್ಕೆ ನಿವೇಶನದ ಸಂಖ್ಯೆ:327 ಉತ್ತರಕ್ಕೆ: ಪ್ರಾಧಿಕಾರದ ಜಾಗ ಮತ್ತು ನಿವೇಶನ ಸಂಖ್ಯೆ: 317 ಮತ್ತು 318 ದಕ್ಷಿಣಕ್ಕೆ: ರಸ್ತೆ ಸ್ಥಿರಾಸ್ತಿ ಹೊಂದಿರುವುದನ್ನು ಮಾರಾಟ ಮಾಡಿದಲ್ಲಿ ಬ್ಯಾಂಕಿಗೆ ವಸೂಲಿ ಮಾಡಿಕೊಳ್ಳಲು ರಹ ಇಲ್ಲದ ಪ್ರಯುಕ್ತ ಅಧಿಭಾರ ಅರ್ಜಿಯಲ್ಲಿ ವಸೂಲಿಗೆ ಕೋರಿರುವ ಮೊತ್ತಕ್ಕೆ ನೀಡಬಹುದಾದ ಆದೇಶಕ್ಕೆ ಪೂರ್ವದಲ್ಲಿ ಜಪ್ತಿ ಮಾಡಿ ಆದೇಶಿಸಲು ಕೋರಿರುತ್ತಾರೆ.

ಮೇಲೆ ತಿಳಿಸಿದ ಸ್ಥಿರಾಸ್ತಿಯನ್ನು ಆದೇಶ ಪೂರ್ವ ಜಪ್ತಿ ಮಾಡುವ ಬಗ್ಗೆ ಈ ನ್ಯಾಯಾಲಯದಿಂದ ದಿನಾಂಕ:23.01.2008ರಂದು ನೋಟೀಸ್ ಜಾರಿ ಮಾಡಲಾಗಿದೆ. ಸದರಿ ನೋಟೀಸ್‌ನ್ನು ಎದುರು ಅರ್ಜಿದಾರರು ದಿನಾಂಕ::23.01.2008ರಂದು ಮುದ್ದಾಂ ಸ್ವೀಕರಿಸಿರುತ್ತಾರೆ. ಸದರಿ ನೋಟೀಸ್‌ನಲ್ಲಿ ರೂ.10,15,449–00 ಗಳಿಗೆ ಸಮನಾದ ಮೊಬಲಗು ನಗದು ಹಣವನ್ನು ಅಥವಾ ಅಷ್ಟು ಬೆಲೆಯ ಜಾಮೀನು ರೂಪದ ಭದ್ರತೆಯನ್ನು ನೋಟೀಸ್ ತಲುಪಿದ 15 ದಿವಸದೊಳಗಾಗಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕು ನಿ., ಚಿತ್ರದುರ್ಗ ಟೌನ್ ಶಾಖೆಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರ ಹೆಸರಿನಲ್ಲಿ ವಿಶೇಷ ಠೇವಣಿ ರೂಪದಲ್ಲಿ ಸಂದಾಯಿಸಿ ಠೇವಣಿ ಮಾಡಿದ ರಸೀದಿ ಅಥವಾ ಚಲನ್‌ಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸುವಂತೆ ತಿಳಿಸಲಾಗಿತ್ತು. ಆದರೆ ಇದುವರೆವಿಗೂ ನಗದು ಹಣ ಅಥವಾ ಜಮೀನು ಭದ್ರತೆಯನ್ನು ಸಲ್ಲಿಸಲು ವಿಫಲರಾಗಿರುವುದರಿಂದ ಈ ಕೆಳಕಂಡ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್‌ಡಿ: ಡಿಡಿಎಸ್: ಅಧಿಭಾರ ಅರ್ಜಿ:03:2007-08, ದಿನಾಂಕ:7ನೇ ಫೆಬ್ರವರಿ, 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103 (2) ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ: 2001 ದಿನಾಂಕ:21.11.2001 ರನ್ವಯ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಇಲ್ಲಾಸ್‌ಉಲ್ಲಾ ಷರೀಫ್, ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಚಿತ್ರದುರ್ಗ ಇದರ ವ್ಯವಸ್ಥಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದುರುಪಯೋಗದ ಮೊಬಲಗು ವಸೂಲಾತಿಗಾಗಿ ಕಾಯ್ದೆ ಕಲಂ 69 ರಡಿಯಲ್ಲಿ ದಾಖಲಿಸಿರುವ ಅಧಿಭಾರ ಪ್ರಕರಣ 3/2007-08 ರಲ್ಲಿ ಒಳಗೊಂಡಿರುವ ಮೊತ್ತ ರೂ.10,15,449-00 (ಹತ್ತು ಲಕ್ಷದ ಹದಿನೈದು ಸಾವಿರದ ನಾಲ್ಕು ನೂರ ನಲವತ್ತೊಂಭತ್ತು) ಗಳಿಗೆ ಹೊರಡಿಸಲಾದ ತೀರ್ಪು ಪೂರ್ವ ಜಪ್ತಿ ಸ್ಥಿರೀಕರಣ ಆದೇಶವನ್ನು ಈ ಕೆಳಕಂಡ ಷೆಡ್ಯೂಲ್‌ಗೆ ಅನುಗುಣವಾಗಿ ನೀಡಿದೆ.

**"ಸ್ಥಿರಾಸ್ತಿಯ ಷೆಡ್ಯೂಲ್"**

ಮೈಸೂರು ಸಿಟಿ ವಿಜಯನಗರ 1ನೇ ಹಂತ 4ನೇ ಮುಖ್ಯ ರಸ್ತೆ, 4ನೇ ಕ್ರಾಸ್ ನಿವೇಶನದ ಸಂಖ್ಯೆ: 328, ಅಳತೆ 12x18 ಮೀಟರ್‌ಗಳು ಚಕ್ಕುಬಂದಿ,

ಪೂರ್ವಕ್ಕೆ ನಿವೇಶನ ಸಂಖ್ಯೆ: 329, ಪಶ್ಚಿಮಕ್ಕೆ: ನಿವೇಶನದ ಸಂಖ್ಯೆ:327, ಉತ್ತರಕ್ಕೆ: ಪ್ರಾಧಿಕಾರದ ಜಾಗ ಮತ್ತು ನಿವೇಶನ ಸಂಖ್ಯೆ:317 ಮತ್ತು 318, ದಕ್ಷಿಣಕ್ಕೆ: ರಸ್ತೆ.

ಮೇಲ್ಕಂಡ ಸ್ಥಿರಾಸ್ತಿಯನ್ನು ಯಾರಾದರೂ ಕ್ರಯಕ್ಕೆ ಅಥವಾ ಇನ್ನಿತರೆ ಯಾವುದೇ ರೂಪದಲ್ಲಿ ಪಡೆದು ವರ್ಗಾವಣೆ ಮಾಡಿಕೊಂಡಲ್ಲಿ ಈ ಪ್ರಕಾರ್ಯದಲ್ಲಿ ತೀರ್ಪು/ ಆದೇಶ ಪೂರ್ವದಲ್ಲಿ ನೀಡಲಾದ ಜಪ್ತಿ ಆದೇಶಕ್ಕೆ ಒಳಪಟ್ಟಿರತಕ್ಕದ್ದೆಂದು ಭಾವಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:07.02.2009ರಂದು ನನ್ನ ಸ್ವ ಹಸ್ತ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್.170  ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ, ಉಪವಿಭಾಗ-2, ಬೈಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು-2, ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ: ಎಸ್‌ಆರ್-1/2009 ಎಫ್, ದಿನಾಂಕ:30ನೇ ಜನವರಿ, 2009**

| ಅರ್ಜಿದಾರರು: | ಪ್ರತಿವಾದಿಗಳು: |
|---|---|
| 1) ಶ್ರೀಮತಿ ಆಲಿಮಾ<br>2) ಶೀಮಿನಾ<br>3) ಅಬ್ದುಲ್ ಸಲೀಂ<br>ಕ್ರ.ಸಂ.1 ಹಸೈನಾರರವರ ಮಡದಿ.<br>ಕ್ರ.ಸಂ.2 ಮತ್ತು 3 ಮಕ್ಕಳು ಅರಿಯಡ್ಕ ವಿಲೇಜ್, ಪುತ್ತೂರು, ತಾಲ್ಲೂಕು. | ಹರಿಲಾಲ್ ಹೆಚ್ ಪಾಟೀಲ್, ಅಬಿಜಾಬಿ ವೃತ್ತ ಪಾಟೀಲರ ಮಗ,<br>ಶ್ರೀ ಕಾಶಿ ಸೋ ಮಿಲ್ ಟಿಂಬರ್ ಯಾರ್ಡ್, ಯುನೈಟೆಡ್, ಹುಬ್ಬಳ್ಳಿ. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಆಲಿಮಾ ಇವರು ತಮ್ಮ ಗಂಡನಾದ: ಶ್ರೀ ಹಸೈನಾರ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:22.06.1993 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪಿ.ಆರ್.124  ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ, ಉಪವಿಭಾಗ-2, ಮಂಗಳೂರು.

## ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎಸ್‌ಡಿಕೆ/319/ ಡಿಟಿಸಿಆರ್/2007–08, ದಿನಾಂಕ:27ನೇ ಜನವರಿ, 2009**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು (2)
ಇ.ಐ.ಬಿ. ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಆರೋಪಿಗಳು:**
1) ಉಸ್ಮಾನ್ ಕೆ. ಬಿನ್ ಅಬೂಬಕ್ಕರ್ (40 ವರ್ಷ)
ಪೊನ್ನೋಡಿ, ಮೂಡ ಗ್ರಾಮ, ಬಂಟ್ವಾಳ ತಾಲ್ಲೂಕು.
2) ಫಯಾಜ್ ಯಾನೆ ಇಮ್ರಾನ್, ಬಿನ್ ಅಜೀಜ್, ಬಂಟ್ವಾಳ ಮೂಡ ಗ್ರಾಮ, ಬಿ.ಸಿ. ರೋಡ್, ಬಂಟ್ವಾಳ ತಾಲ್ಲೂಕು.

**ವಾಹನ ಮಾಲೀಕರು:**
ಶ್ರೀ ಕಾಸಿಮ್, ಬಿನ್ ಹಸನಬ್ಬ, ಡೋರ್ ನಂ.14–197
ಬಂಟ್ವಾಳ ಮೂಡ ಗ್ರಾಮ, ಬಂಟ್ವಾಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09.02.2008ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಫಿರ್ಯಾದುದಾರರು ಸಿಬ್ಬಂದಿಗಳೊಂದಿಗೆ ಬಂಟ್ವಾಳ ತಾಲ್ಲೂಕಿನ ಮೂಡ ಗ್ರಾಮದ ಪೊನ್ನೋಡಿ ಎಂಬಲ್ಲಿರುವ ಮನೆ ನಂ.14/275 ರಲ್ಲಿರುವ ಮನೆಯನ್ನು ಶೋಧಿಸಲೆಂದು ಅಲ್ಲಿ ಇದ್ದ ವ್ಯಕ್ತಿಗೆ ತಿಳಿಸಿ, ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದೆ ಇರುವುದರಿಂದ ಸ್ಥಳದಲ್ಲಿಯೇ ಕರ್ನಾಟಕ ಅಬಕಾರಿ 1965ರ ಕಲಂ 54ರ ಮೇರೆಗೆ ನ್ಯಾಯಾಲಯಕ್ಕೆ ಸಲ್ಲಿಸಲು ಒಂದು ಅಧಿಕಾರ ಪತ್ರವನ್ನು ತಯಾರಿಸಿ ಮನೆಯನ್ನು ಶೋಧಿಸಿದಾಗ, ಸದರಿ ಮನೆಯ ಎಡಭಾಗದಲ್ಲಿರುವ ಕೋಣೆಯಲ್ಲಿ ಸಾರಾಯಿ ತಯಾರಿಕೆ ಮಾಡುವ ಯಂತ್ರವು ಚಾಲನೆ ಸ್ಥಿತಿಯಲ್ಲಿದ್ದು ಸಾರಾಯಿ ಸ್ಯಾಚೆಟ್‌ಗಳ ತಯಾರಿಕೆ ಸರಾಗವಾಗಿ ನಡೆಯುತ್ತಿತ್ತು. ಯಾವುದೇ ಪರವಾನಿಗೆ ಇಲ್ಲದೆ ನಕಲಿ ಸಾರಾಯಿ ತಯಾರಿಸುತ್ತಿರುವುದು ಇದು ಅಕ್ರಮ ಸಾರಾಯಿ ತಯಾರಿಕೆ ಘಟಕವಾಗಿದ್ದು, ಹಾಜರಿದ್ದ ಆರೋಪಿಗಳ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ತನ್ನ ಹೆಸರು ಉಸ್ಮಾನ್ ಕೆ., ಬಿನ್ ಅಬೂಬಕ್ಕರ್ (40ವ), ಪೊನ್ನೋಡಿ, ಮೂಡ ಗ್ರಾಮ, ಬಂಟ್ವಾಳ ತಾಲ್ಲೂಕು ಮತ್ತು ಫಯಾಜ್ ಯಾನೆ ಇಮ್ರಾನ್, ಬಿನ್ ಅಜೀಜ್, ಬಂಟ್ವಾಳ ಮೂಡ ಗ್ರಾಮ, ಬಿ.ಸಿ. ರೋಡ್, ಬಂಟ್ವಾಳ ತಾಲ್ಲೂಕು ಎಂದು ತಿಳಿಸಿದನು. ಸಾರಾಯಿ ಸ್ಯಾಚೆಟ್‌ಗಳನ್ನು ಯಾರಿಗೆ ಹೇಗೆ ಸಾಗಿಸುತ್ತೀರಿ ಎಂದು ವಿಚಾರಿಸಿದಾಗ, ಸಾರಾಯಿ ತಯಾರು ಮಾಡುವ ಮೂಲ ರೂವಾರಿ ಉಸ್ಮಾನ್.ಕೆ ಮತ್ತು ಹನೀಫ್ ಎಂಬುವರು ತಯಾರಿಸುತ್ತಿರುವುದು ಮತ್ತು ಕ್ವಾಲಿಸ್ ವಾಹನ ಸಂಖ್ಯೆ: ಕೆಎ–03–ಎಂಎ–8614 ರಲ್ಲಿ ಸಾರಾಯಿ ತುಂಬಿದ ಸ್ಯಾಚೆಟ್‌ಗಳನ್ನು ತುಂಬಿಸಿಕೊಂಡು ಮಂಗಳೂರಿಗೆ ಹಂಚಲು ಸಿಬ್ಬಂದಿಯವರು ಬರುವ ಮೊದಲು ಹೋಗಿರುತ್ತಾರೆ ಎಂದು ತಿಳಿಸಿದನು. ಸದರಿ ಮನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಮದ್ಯಸಾರವನ್ನು ಹೊಂದಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸುತ್ತಿರುವುದನ್ನು ಪತ್ತೆ ಹಚ್ಚಿ, ಸಾರಾಯಿ ತಯಾರಿಕೆಗೆ ಉಪಯೋಗಿಸಿದ ಈ ಕೆಳಗಿನ ಸಲಕರಣೆಗಳನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ.

1) 35 ಲೀಟರ್ ಗಾತ್ರದ 87 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ತಲಾ 35 ಲೀಟರ್‌ನಂತೆ ಒಟ್ಟು 3045–000 ಲೀಟರ್ ಮದ್ಯಸಾರ.

2) 200 ಲೀಟರ್ ಗಾತ್ರದ ನೀಲಿ ಬಣ್ಣದ ಒಂದು ಫೈಬರ್ ಡ್ರಮ್‌ನಲ್ಲಿ 150 ಲೀಟರ್ ಬಲ್ಕ್ ಸಾರಾಯಿ.

3) 200 ಲೀಟರ್ ಗಾತ್ರದ ಬಿಳಿ ಬಣ್ಣದ ಒಂದು ಫೈಬರ್ ಡ್ರಮ್‌ನಲ್ಲಿ 50 ಲೀಟರ್ ಬಲ್ಕ್ ಸಾರಾಯಿ.

4) 10 ಪ್ಲಾಸ್ಟಿಕ್ ಚೀಲಗಳಲ್ಲಿ ತಲಾ 500 ರಂತೆ ಒಟ್ಟು 100 ಎಂ.ಎಲ್.ನ 5000 ಸಾರಾಯಿ ಸ್ಯಾಚೆಟ್‌ಗಳು–500–000 ಲೀಟರ್ ಸಾರಾಯಿ.

5) ಒಂದು ಗೋಣಿ ಚೀಲದಲ್ಲಿ 2 ದೊಡ್ಡ ಫಿಲ್ಮ್ ರೋಲ್‌ಗಳು.

6) 35 ಲೀಟರ್ ಗಾತ್ರದ ಬಿಳಿ ಬಣ್ಣದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು–22

7) 1/2 ಹೆಚ್.ಪಿ. ಸಾಮರ್ಥ್ಯದ ಮೊನೊ ಬ್ಲಾಕ್ ಪಂಪ್–1.

8) ಒಂದು ಹೆಚ್.ಪಿ. ಮೋಟಾರು ಸಹಿತ ಸಾರಾಯಿ ಸ್ಯಾಚೆಟ್ ತಯಾರಿಸುವ ಯಂತ್ರ–1.

9) 20 ಲೀಟರ್ ಗಾತ್ರದ ಸಾರಾಯಿ ವಾಸನೆಯಿಂದ ಸ್ಟೀಲ್ ಡ್ರಂ–1.

10) 3 ಮೀಟರ್ ಉದ್ದದ ಪ್ಲಾಸ್ಟಿಕ್ ಪೈಪ್–1

11) 2 ಮೀಟರ್ ಉದ್ದದ ಪ್ಲಾಸ್ಟಿಕ್ ಪೈಪ್–1.

ಸದರಿ ಮದ್ಯಸಾರದಿಂದ ತಲಾ 180 ಎಂ.ಎಲ್. ನಂತೆ ಎಲ್ಲ 87 ಕ್ಯಾನುಗಳಿಂದ ಒಂದೊಂದು ಬಾಟಲ್ ಮದ್ಯಸಾರವನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆಯಲಾಗಿದೆ ಮತ್ತು ಬಲ್ಕ್ ಸಾರಾಯಿಯಿಂದ 180 ಎಂ.ಎಲ್. 2 ಬಾಟಲ್ ಹಾಗೂ ಸಾರಾಯಿ ಸ್ಯಾಚೆಟ್‌ಗಳಿಂದ ಒಂದು ಗೋಣಿ ಚೀಲದಿಂದ ಒಂದೊಂದರಂತೆ 10 ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದು ಕಟ್ಟು ಮಾಡಿ ರಾಸಾಯನಿಕ ಪರೀಕ್ಷೆಗಾಗಿ ತೆಗೆಯಲಾಗಿದೆ.

ಮನೆಯ ಅಂಗಳದಲ್ಲಿ ನಿಂತಿದ್ದ ಬಿಳಿ ಮಾರುತಿ ಒಮಿನಿ ಕಾರು ಸಂಖ್ಯೆ: ಕೆಎ–19–ಎಂ–3485 ನ್ನು ಸಂಶಯದ ಮೇರೆಗೆ ನೋಡಿದಾಗ, ಅದರಲ್ಲಿ ಸಾಗಾಟ ಮಾಡಲೆಂದು ದಾಸ್ತಾನು ಇಟ್ಟಿದ್ದ ಗೋಣಿ ಚೀಲದ ಕಟ್ಟುಗಳು ಇರುವುದು ಕಂಡು ಬಂದವು. ಈ ಬಗ್ಗೆ ಕಾರನ್ನು ಶೋಧಿಸಲು ಸರ್ಚ್ ವಾರಂಟ್ ಪಡೆಯಲು ಸಮಯಾವಕಾಶ ಇಲ್ಲದ ಕಾರಣ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲು ಶೋಧನೆಗೆ ಕಾರಣವನ್ನು ದಾಖಲಿಸಿಕೊಂಡು ಅಧಿಕಾರಿಯವರು ಸದರಿ ವಾಹನವನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಅದರ ಹಿಂಬದಿಯಲ್ಲಿ 7 ಗೋಣಿ ಚೀಲಗಳಿದ್ದು, ಅವುಗಳನ್ನು ಬಿಚ್ಚಿ ನೋಡಿದಾಗ ತಲಾ 500 ರಂತೆ ಒಟ್ಟು 100 ಎಂ.ಎಲ್.ನ 3500 ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂತು. ಸದರಿ ಪ್ರತಿ ಗೋಣಿ ಚೀಲದಿಂದ ಒಂದೊಂದರಂತೆ 100 ಎಂ.ಎಲ್.ನ 7 ಸಾರಾಯಿ ಸ್ಯಾಚೆಟ್‌ಗಳನ್ನು ತೆಗೆದು ಒಂದು ಕಟ್ಟು ಮಾಡಿ ರಾಸಾಯನಿಕ ಪರೀಕ್ಷೆಗಾಗಿ ತೆಗೆಯಲಾಗಿದೆ.

**ಸ್ಥಳ ಚೆಕ್‌ಬಂದಿ:**

ಪೂರ್ವಕ್ಕೆ ಕೊಟ್ಟಿಗೆ ಇದ್ದು ಪಶ್ಚಿಮಕ್ಕೆ ಖಾಲಿ ಜಾಗವಿರುತ್ತದೆ. ದಕ್ಷಿಣಕ್ಕೆ ಆಪಾದಿತನ ವಾಸದ ಮನೆ ಇದ್ದು, ಉತ್ತರಕ್ಕೆ ಕಾಡು ಪ್ರದೇಶ ಹಾಗೂ ಮಣ್ಣಿನ ರಸ್ತೆ ಇರುತ್ತದೆ. ಸದರಿ ಮಹಜರನ್ನು ದಿನಾಂಕ:09.02.2008 ರಂದು ಬೆಳಿಗ್ಗೆ 5.30 ರಿಂದ 8.30 ಗಂಟೆಯವರೆಗೆ ಬರೆದು ಪಂಚರ ಹಾಗೂ ಇಲಾಖಾ ಸಿಬ್ಬಂದಿಯವರ ಸಹಿ ಪಡೆದಿರುತ್ತಾರೆ.

ಪ್ರಕರಣ ನಡೆದ ಸ್ಥಳದಲ್ಲಿರುವ ಡೋರ್ ನಂ.14/275ರ ಮನೆಯಲ್ಲಿ ಅಕ್ರಮವಾಗಿ ಮದ್ಯಸಾರ ದಾಸ್ತಾನು ಹೊಂದಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸಿ ಹಾಗೂ ಕಾರಿನಲ್ಲಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಟ ಮಾಡುತ್ತಿರುವುದು ಇದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13, 14 ಮತ್ತು 15ರ ಪ್ರಕಾರ ಅಪರಾಧ ಹಾಗೂ ಕಲಂ 32 ಮತ್ತು 38(ಎ) ಹಾಗೂ 43(ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದರಿ ಸೊತ್ತುಗಳನ್ನು ಹಾಗೂ ಸಾಗಾಟಕ್ಕೆ ಬಳಸಿದ ಕಾರನ್ನು ಇಲಾಖಾ ವಶಕ್ಕೆ ವಶಪಡಿಸಿಕೊಂಡು, ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ:9/07–08 ದಿನಾಂಕ:09.02.2008ರಂತೆ ಪ್ರಕರಣವನ್ನು ನೋಂದಾಯಿಸಿ ಸೊತ್ತುಗಳ ಪಟ್ಟಿ ತಯಾರಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣಕ್ಕೆ ಸಂಬಂಧಪಟ್ಟ ಪಂಚನಾಮೆ ಪ್ರತಿ, ಪ್ರಥಮ ಮಾಹಿತಿ ವರದಿ ಪ್ರತಿ, ಸೊತ್ತುಗಳ ಪಟ್ಟಿಯ ಪ್ರತಿಯನ್ನು ಫಿರ್ಯಾದಿನೊಂದಿಗೆ ಪ್ರಾಧಿಕಾರಕ್ಕೆ ಸಲ್ಲಿಸಿ ಪ್ರಕರಣದ ಸೊತ್ತುಗಳನ್ನು ಹಾಗೂ ದಾಖಲೆ ಪತ್ರಗಳನ್ನು ಮುಂದಿನ ತನಿಖೆ ಬಗ್ಗೆ ಅಬಕಾರಿ ಉಪ ನಿರೀಕ್ಷಕರು (2), ಜಾರಿ ಮತ್ತು ತನಿಖೆ, ಬಂಟ್ವಾಳ ಇವರಿಗೆ ಹಸ್ತಾಂತರಿಸಲು ದಿನಾಂಕ:10.02.2008ರಂದು ಈ ಪ್ರಾಧಿಕಾರಕ್ಕೆ ಕೋರಿದ್ದು, ಪ್ರಾಧಿಕಾರವು ದಿನಾಂಕ:12.02.2008 ರಂದು ಪ್ರಕರಣದಲ್ಲಿ ಜಪ್ತು ಮಾಡಿರುವ ಸೊತ್ತುಗಳ ಸಮೇತ ದಾಖಲೆ ಪತ್ರಗಳನ್ನು ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ಸದರಿ ಹಸ್ತಾಂತರ ಪಡೆದ ಅಬಕಾರಿ ಉಪ ನಿರೀಕ್ಷಕರು (2), ಬಂಟ್ವಾಳ ವಲಯ ಇವರು ತನಿಖೆಯನ್ನು ಪ್ರಾರಂಭಿಸಿ, ವಶಪಡಿಸಿಕೊಂಡ ಮದ್ಯಸಾರ, ಸಾರಾಯಿ ಸ್ಯಾಚೆಟ್‌ಗಳು ಮತ್ತು ಬಲ್ಕ್ ಸಾರಾಯಿಂದ ತೆಗೆದ ಸ್ಯಾಂಪಲ್‌ಗಳನ್ನು ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರು ದಿನಾಂಕ:16.02.2008ರಂದು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸದರಿ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ: ಇ–87–106/23–2–08, ದಿನಾಂಕ:14.03.2008ರಲ್ಲಿ ಜಪ್ತು ಮಾಡಲ್ಪಟ್ಟಿರುವ ಮದ್ಯಸಾರದ ಮದ್ಯಸಾರ ಪ್ರಮಾಣ 94% ಸಾರಾಯಿ ಸ್ಯಾಚೆಟ್‌ಗಳ ಮದ್ಯಸಾರ ಪ್ರಮಾಣ 31.5% ಮತ್ತು ಬಲ್ಕ್ ಸಾರಾಯಿಯ ಮದ್ಯಸಾರ ಪ್ರಮಾಣ 31.5% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಇದರಂತೆ ಅಬಕಾರಿ ಉಪ ನಿರೀಕ್ಷಕರು (2), ಬಂಟ್ವಾಳ ವಲಯ ಇವರು ತನ್ನ ವರದಿ ಸಂಖ್ಯೆ: ಆರ್.ಸಿ.ಆರ್/46/07–08 ದಿನಾಂಕ:30.04.2008ರಲ್ಲಿ ಸದರಿ ಮೊಕದ್ದಮೆಯಲ್ಲಿ ಜಪ್ತುಪಡಿಸಿದ ವಾಹನದ ಮುಟ್ಟುಗೋಲು ನಡವಳಿ ಪ್ರಕ್ರಿಯೆಯನ್ನು ಕಾಯ್ದಿರಿಸಿ ಮದ್ಯಸಾರ, ಬಲ್ಕ್ ಸಾರಾಯಿ, ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಇತರ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರ, ಬಲ್ಕ್ ಸಾರಾಯಿ ಮತ್ತು ಸಾರಾಯಿ ಸ್ಯಾಚೆಟ್‌ಗಳನ್ನು ನಾಶಪಡಿಸಲು ಮತ್ತು ಉಳಿದ ಸೊತ್ತುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರ ಶಿಫಾರಸ್ಸಿನ ಮೇರೆಗೆ ತಕ್ಷೀರಿನಲ್ಲಿ

ವಶಪಡಿಸಿಕೊಂಡ ಸೊತ್ತುಗಳ ಪೈಕಿ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಜಪ್ತುಪಡಿಸಲಾಗಿರುವ ಎಲ್ಲಾ ಸೊತ್ತುಗಳನ್ನು (ವಾಹನವನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರ, ಬಲ್ಕ್ ಸಾರಾಯಿ, ಸಾರಾಯಿ ಸ್ಯಾಚೆಟ್‌ಗಳು ಹಾಗೂ ಫಿಲ್ಮ್ ರೋಲುಗಳು ಮತ್ತು ಪ್ಲಾಸ್ಟಿಕ್ ಪೈಪ್‌ಗಳನ್ನು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಹಾಗೂ ಇತರೆ ಸೊತ್ತುಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲು ದಿನಾಂಕ:04.08.2008ರಂದು ಆದೇಶ ನೀಡಲಾಗಿರುತ್ತದೆ.

ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:29.06.2008 ರಂದು ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ಕಾರಣ ಕೇಳಿ ನೋಟೀಸುಗಳು ಜಾರಿಯಾಗದೆ ಹಿಂದೆ ಬಂದಿರುತ್ತದೆ.

ಅಬಕಾರಿ ಉಪ ನಿರೀಕ್ಷಕರು (2), ಬಂಟ್ವಾಳ ವಲಯ ಇವರು ಪ್ರಕರಣಕ್ಕೆ ಸಂಬಂಧಿಸಿದ ವಾಹನದ 'ಬಿ' ರಿಜಿಸ್ಟಾರ್ ಎಕ್ಸ್‌ಟ್ರ್ಯಾಕ್ಟ್‌ನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಂದ ಪಡೆದು ಈ ಪ್ರಾಧಿಕಾರಕ್ಕೆ ದಿನಾಂಕ:30.08.2008ರಂದು ಸಲ್ಲಿಸಿರುತ್ತಾರೆ. 'ಬಿ' ರಿಜಿಸ್ಟಾರ್ ಎಕ್ಸ್‌ಟ್ರ್ಯಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಸಂಖ್ಯೆ: ಕೆಎ–19–ಎಂ–3485 ಮಾರುತಿ ಒಮಿನಿ ಕಾರು ಆಗಿದ್ದು ಇದರ ಚಾಸೀಸ್ ಸಂಖ್ಯೆ: 946384 ಮತ್ತು ಇಂಜಿನ್ ಸಂಖ್ಯೆ: 881719 ಆಗಿದ್ದು, 1993 ರ ಮಾಡೆಲ್ ಆಗಿರುತ್ತದೆ. ಇದರ ನೋಂದಣಿ ಮಾಲೀಕ ಶ್ರೀ ಕಾಸಿಮ್, ಬಿನ್ ಹಸನಬ್ಬ, ಡೋರ್ ನಂ.14–197, ಬಂಟ್ವಾಳ ಮೂಡ, ಬಂಟ್ವಾಳ ಆಗಿದ್ದು, ಇದಕ್ಕೆ ಹಣ ಸಾಲ ಕೊಟ್ಟ ಫೈನಾನ್ಸ್‌ರಾದ ಶ್ರೀ ರಾಮ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪೆನಿ, ಮೂಕಾಂಬಿಕ ಕಾಂಪ್ಲೆಕ್ಸ್, ಮೈಲಾಪೇರಿ, ಚೆನ್ನೈ ಎಂಬುವುದಾಗಿ ತಿಳಿದು ಬಂದಿದೆ.

ಈ ಪ್ರಾಧಿಕಾರವು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ನೀಡಲಾಗಿರುವ ಬಿ ರಿಜಿಸ್ಟಾರ್ ಎಕ್ಸ್‌ಟ್ರ್ಯಾಕ್ಟ್ ವರದಿ ಪ್ರಕಾರ ಜಪ್ತು ಮಾಡಲಾದ ವಾಹನ ಮಾಲೀಕನಾದ ಶ್ರೀ ಕಾಸಿಮ್ ಮತ್ತು ಫೈನಾನ್ಸ್‌ರಾದ ಶ್ರೀರಾಮ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂಪೆನಿ ಇವರಿಗೆ ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಸಾಗಾಟ ಮಾಡಿರುವ ಅಪರಾಧಕ್ಕೆ ವಾಹನವನ್ನು ಯಾಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ದಿನಾಂಕ:23.10.2008ರಂತೆ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಿದ್ದು, ಸದರಿ ವಿಳಾಸದಲ್ಲಿ ವಾಹನ ಮಾಲೀಕರು ಶ್ರೀ ಕಾಸಿಮ್ ಇರುವುದಿಲ್ಲವೆಂದು ನೋಟೀಸು ಈ ಪ್ರಾಧಿಕಾರಕ್ಕೆ ಹಿಂದೆ ಬಂದಿರುತ್ತದೆ. ಹಾಗೂ ಸದರಿ ವಾಹನದ ಫೈನಾನ್ಸಿಯರ್ ಸಂಸ್ಥೆಯಾದ ಶ್ರೀರಾಮ ಟ್ರಾನ್ಸ್‌ಪೋರ್ಟ್ ಕಂಪೆನಿ ಇವರಿಂದ ಸಹಾ ಯಾವುದೇ ಉತ್ತರ ಸ್ವೀಕೃತವಾಗಿರುವುದಿಲ್ಲ. ಈ ಪ್ರಕರಣವು ದಾಖಲಾಗಿ ಸುಮಾರು 11 ತಿಂಗಳು ಸಮಯ ಕಳೆದರೂ ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪವಿಭಾಗ, ಬಂಟ್ವಾಳ ಇವರ ವರದಿ ಸಂಖ್ಯೆ:106/2007–08 ದಿನಾಂಕ:31.12.2008ರಲ್ಲಿ ವಶಪಡಿಸಿಕೊಂಡ ಮಾರುತಿ ಓಮಿನಿ ಕಾರು ಸಂಖ್ಯೆ:ಕೆಎ–19–ಎಂ–3485 ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ರೀತ್ಯಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು (2), ಇ.ಐ.ಬಿ., ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಅಕ್ರಮವಾಗಿ 3045–000 ಲೀಟರ್ ಮದ್ಯಸಾರ, 200–000 ಲೀಟರ್ ಬಲ್ಕ್ ಸಾರಾಯಿ ಮತ್ತು 485–000 ಲೀಟರ್ ಸಾರಾಯಿ ಸ್ಯಾಚೆಟ್‌ಗಳನ್ನು ಅಕ್ರಮವಾಗಿ ತಯಾರಿಸುತ್ತಿದ್ದ ಅಪರಾಧ ಸ್ಥಳದಲ್ಲಿ ಸದರಿ ವಾಹನದಲ್ಲಿ 100 ಎಂ.ಎಲ್.ನ 500 ಸಾರಾಯಿ ಸ್ಯಾಚೆಟ್‌ಗಳ 7 ಗೋಣಿ ಚೀಲಗಳನ್ನು ಅಕ್ರಮವಾಗಿ ಸಾಗಿಸಲು ಸಂಗ್ರಹಿಸಿದ್ದ ಸಾರಾಯಿಯೊಂದಿಗೆ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ಮತ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯಸಾರ, ಬಲ್ಕ್ ಸಾರಾಯಿ ಮತ್ತು ಸಾರಾಯಿ ಸ್ಯಾಚೆಟ್‌ಗಳಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನು ಉಲ್ಲಂಘನೆ ಮಾಡಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದನ್ನು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ, ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ ಓಮಿನಿ ಕಾರು ಸಂಖ್ಯೆ: ಕೆಎ–19–ಎಂ–3485 ನ್ನು ವಶಪಡಿಸಿಕೊಂಡು ಸುಮಾರು 11 ತಿಂಗಳಿಗಿಂತ ಹೆಚ್ಚು ಸಮಯವಾಗಿದ್ದು, ಯಾವುದೇ ವ್ಯಕ್ತಿಯು ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ 'ಬಿ' ರಿಜಿಸ್ಟಾರ್ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ವಾಹನ ಮಾಲೀಕರ ವಿಳಾಸಕ್ಕೆ ನೀಡಿರುವ ಕಾರಣ ಕೇಳಿ ನೋಟೀಸು ಸ್ವೀಕೃತವಾಗದೆ ಹಿಂದೆ ಬಂದಿರುವ ಹಿನ್ನೆಲೆಯಲ್ಲಿ ವಾಹನದ ಮಾಲೀಕರು ಅವರ ತಿಳುವಳಿಕೆಯಿಂದ ಈ ಕೃತ್ಯದಲ್ಲಿ ಶಾಮೀಲಾಗಿ ಈ ಕೃತ್ಯವೆಸಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಆದುದರಿಂದ ಅಕ್ರಮವಾಗಿ ಮದ್ಯಸಾರ ಹೊಂದಿ ನಕಲಿ ಸಾರಾಯಿ ಸ್ಯಾಚೆಟ್‌ಗಳನ್ನು ತಯಾರಿಸಿ ಅಕ್ರಮವಾಗಿ ಸಾಗಾಟ ಮಾಡುತ್ತಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ತಿಳಿದು ಬರುವುದರಿಂದ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಾಣಬರುವುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ ಅಧಿನಿಯಮ 1965ರ ನಿಯಮ 43(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ನಿಯಮ 43(ಎ)(2)ರ ಅನ್ವಯ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟಿರುವ ವಾಹನ ಸಂಖ್ಯೆ: ಕೆಎ–19–ಎಂ–3485 (ಚಾಸೀಸ್ ನಂ.946384 ಎಂಜಿನ್ ಸಂಖ್ಯೆ: 881719) ಮಾರುತಿ ಓಮಿನಿ ಕಾರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:27.01.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.172

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಸಂಖ್ಯೆ: ಕಾಅಕೊ/ ಕಾನಪ/ ಮ.ಪ್ರ/ ಸಂಖ್ಯೆ: 14, 2009 ದಿನಾಂಕ:27ನೇ ಜನವರಿ, 2009**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| 1) ಶಾರಮ್ಮ ಗಂಡ (ರಾಠೋಡ್) ನಾಗೇಶ್ ರಾಠೋಡ್ | 1) ಸಾಹೇಬ್ ತಂದೆ ಸೈಯದ್ ಖಾದರಬಾಷ, ಚಾಲಕ ಸಾ: ಮುಕ್ಕುಂದ ತಾ: ಸಿಂಧನೂರ. |
| 2) ಮೇಘರಾಜ ತಂದೆ ನಾಗೇಶ್ ರಾಠೋಡ್ | 2) ನಿಂಗಪ್ಪ ತಂದೆ ಈರಪ್ಪ ಕುರಿ, ಕೆಎ–37:ಟಿ–9324 ಮತ್ತು ಕೆಎ–37:ಟಿ–9325 ಟ್ರ್ಯಾಕ್ಟರ್ ಟ್ಯಾಲಿಯ ಮಾಲೀಕರು, ವಾಸ: ಬಲೂಟಗಿ: ತಾ: ಯಲಬುರ್ಗಾ ಜಿ: ಕೊಪ್ಪಳ. |
| 3) ಲಕ್ಷ್ಮವ್ವ ತಂದೆ ನಾಗೇಶ್ ರಾಠೋಡ್ | 3) ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |
| 4) ಆನಂದ ತಂದೆ ನಾಗೇಶ್ ರಾಠೋಡ್ | |
| 5) ನಾನಪ್ಪ ತಂದೆ ಚಂದ್ರಪ್ಪ ರಾಠೋಡ್ | |
| 6) ಅಂಬವ್ವ ಗಂಡ ನಾನಪ್ಪ ರಾಠೋಡ್ | |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ನಾಗೇಶ್ ರಾಠೋಡ್ ತಂದೆ ನಾನಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:04.08.2007 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ನಾಗೇಶ ರಾಠೋಡ್ ತಂದೆ ನಾನಪ್ಪ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಶಾರಮ್ಮ ಗಂಡ ನಾಗೇಶ್ ರಾಠೋಡ್ ಹಾಗೂ ಅವಲಂಬಿತರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ

ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಸಂಖ್ಯೆ: ಕಾಅಕೊ/ ಕಾನಪ/ ಮ.ಪ್ರ/ ಸಂಖ್ಯೆ: 17, 2009 ದಿನಾಂಕ:29ನೇ ಜನವರಿ, 2009**

| **ಅರ್ಜಿದಾರರು:** | **ಪ್ರತಿವಾದಿಗಳು:** |
| --- | --- |
| 1) ಶ್ರೀಮತಿ ಮಾಬುನ್ನಿ ಗಂಡ ಶಫೀ ಅಲಿಯಾಸ್ ಶಫೀಉಲ್ಲಾ, | 1) ಕಾಸೀಂಪೀರಾ ತಂದೆ ಮಹೆಬೂಬ್ ಸಾಬ್, ಲಾರಿ ಮಾಲೀಕರು, ಸಂಡೂರು. |
| 2) ಬಿ. ಇಬ್ರಾಹಿಂ ಸಾಬ್ ತಂದೆ ಬಿ. ಕರೀಂಖಾನ್ ಸಾಬ್, ವಾಸ: ಹುಲಿಗಿ ಗ್ರಾಮ, ತಾ:ಜಿ: ಕೊಪ್ಪಳ. | 2) ಅಬ್ದುಲ್ ಕಲಾಂ ಅಜಾದ್ ತಂದೆ ಅಬ್ದುಲ್ ರಶೀದ್ ಸಾಬ್, ಲಾರಿಯ ಪಾಲಸಿದಾರರು, ವಡ್ಡರಹಳ್ಳಿ (ವಿ) ತಾ: ಸಂಡೂರು. |
| | 3) ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಬಳ್ಳಾರಿ. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಶಫೀ ಅಲಿಯಾಸ್ ಶಫೀಉಲ್ಲಾ ಬಿ. ಇಬ್ರಾಹಿಂ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:18.04.2006 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಶಫೀ ತಂದೆ ಇಬ್ರಾಹಿಂ ಸಾಬ್ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಮಾಬುನ್ನಿ ಗಂಡ ಶಫೀ ಮತ್ತು ಇಬ್ರಾಹಿಂಸಾಬ್ ತಂದೆ ಕರೀಂಖಾನ್ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಸಂಖ್ಯೆ: ಕಾಅಕೊ/ ಕಾನಪ/ ಮ.ಪ್ರ/ ಸಂಖ್ಯೆ: 19, 2009 ದಿನಾಂಕ:27ನೇ ಜನವರಿ, 2009**

| **ಅರ್ಜಿದಾರರು:** | **ಪ್ರತಿವಾದಿಗಳು:** |
| --- | --- |
| 1) ಶ್ರೀಮತಿ ಕಸ್ತೂರವ್ವ ಗಂಡ ಶರಣಪ್ಪ ಬುರಡಿ | ವಿಭಾಗೀಯ ನಿಯಂತ್ರಣಾಧಿಕಾರಿಗಳು, |
| 2) ಕು: ಮಧು ತಂದೆ ಶರಣಪ್ಪ ಬುರಡಿ | ಮೆ:ಎನ್.ಡಬ್ಲ್ಯೂ.ಆರ್.ಟಿ.ಸಿ. ಗದಗ್ ವಿಭಾಗ, ಗದಗ. |
| 3) ಕು: ಅಭಿಶೇಕ್ ತಂದೆ ಶರಣಪ್ಪ ಬುರಡಿ | |
| 4) ಮುದಕಪ್ಪ ತಂದೆ ಮರಿಯಪ್ಪ ಬುರಡಿ | |
| 5) ಶ್ರೀಮತಿ ಕೆಂಚವ್ವ ಗಂಡ ಮುದಕಪ್ಪ ಬುರಡಿ | |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಶರಣಪ್ಪ ತಂದೆ ಮುದಕಪ್ಪ ಬುರಡಿ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.02.2008 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ, ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಶರಣಪ್ಪ ತಂದೆ ಮುದಕಪ್ಪ ಬುರಡಿ

ಇವರ ವಾರಸುದಾರರಾದ ಶ್ರೀ/ಶ್ರೀಮತಿ ಕಸ್ತೂರವ್ವ ಗಂಡ ಶರಪ್ಪ ಹಾಗೂ ಇತರರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್.148

## ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ: ಮರಣಪ್ರ:ಎಸ್ಆರ್ 4:2009, ದಿನಾಂಕ:28ನೇ ಜನವರಿ, 2009**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಶ್ರೀಮತಿ ಮಾಲನಬಿ ಕೋಂ ಅಬುಬಕರ್, ಖಲಿಫಾ ಮತ್ತು ಇತರರು, ಸಾ: ಬಿಜಾಪುರ. | 1) ಶ್ರೀಮತಿ ಸವಿತಾ ಭೀಮಪ್ಪ ಕುಳಗೇರಿ, ಸಾ: ಬೇಡಿಗೇರ ಗಲ್ಲಿ, ಬಿಜಾಪುರ.<br>2) ಚೋಲಮಂಡಲಂ, ಎಂ.ಎಸ್. ಜನರಲ್ ಇನ್ಸೂರೆನ್ಸ್ ಕಂ.ಲಿ., ಚೆನ್ನೈ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಅಬುಬಕರ್ ತಂದೆ ಮೌಲಾಸಾಬ ಅಲಿಫಾ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:09.08.2008 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಹಾಗೂ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪೂರ.

## ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್ 5:2009, ದಿನಾಂಕ:28ನೇ ಜನವರಿ, 2009**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಶ್ರೀಮತಿ ಮನಾಂದಾ ಕೋಂ ಶಾಂತಪ್ಪ ಚಬನೂರ, ಮತ್ತು ಇತರರು, ಸಾ: ಸಿಂಧಗಿ, ಜಿಲ್ಲೆ: ಬಿಜಾಪುರ. | 1) ಶ್ರೀ ಗೊಲ್ಲಾಳಪ್ಪ ತಂದೆ ಈರಪ್ಪ ಸಾವಳಗಿ, ಸಿಂಧಗಿ, ಜಿಲ್ಲೆ: ಬಿಜಾಪುರ.<br>2) ದಿ ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಶಾಂತಪ್ಪ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:04.11.2008 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆ ಹಾಗೂ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್ 7:2009, ದಿನಾಂಕ:30ನೇ ಜನವರಿ, 2009**

**ಅರ್ಜಿದಾರರು:**
1) ಶ್ರೀ ಶಿವಲಿಂಗಪ್ಪ ತಂದೆ ಶರಣಪ್ಪ
2) ಶ್ರೀಮತಿ ಕಸ್ತೂರಬಾಯಿ ಗಂಡ: ಶಿವಲಿಂಗಪ್ಪ, ಸಾ: ಜೇವರ್ಗಿ ಜಿಲ್ಲೆ, ಗುಲಬರ್ಗಾ ಹಾಲಿ ಕೀರ್ತಿನಗರ, ಬಿಜಾಪುರ.

**ಪ್ರತಿವಾದಿಗಳು:**
1) ಶ್ರೀ ಹಾಲೆನ್ನ ಶಿವಲಿಂಗಪ್ಪ ಸಾವಳಗಿ, ಸಾ: ದುಮದ್ರಿ, ಪೋಸ್ಟ್, ಮಳ್ಳಿ ತಾ: ಜೇವರ್ಗಿ ಜಿಲ್ಲೆ: ಗುಲಬರ್ಗಾ.
2) ದಿ ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಮಲ್ಲಿಕಾರ್ಜುನ ಉರ್ಫ್ ಮಲ್ಲು ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:26.10.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆ ಹಾಗೂ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪೂರ.

ಪಿ.ಆರ್.149

## ಯುವಜನ ಸೇವಾ ಇಲಾಖೆ

### ಅಧಿಕೃತ ಜ್ಞಾಪನ

**ಸಂಖ್ಯೆ: ಯುಸೇಇ 45 ಯುಇಸೇ 08, ಬೆಂಗಳೂರು, ದಿನಾಂಕ:24ನೇ ಜನವರಿ, 2009**

**ವಿಷಯ:** ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕ್ರೀಡಾ ತರಬೇತುದಾರರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1) ಪತ್ರಸಂಖ್ಯೆ: ಯುಸೇಕ್ರೀನಿ/ ಸಿ1/03/07–08, ದಿನಾಂಕ:10/23.04.2008 ಹಾಗೂ ದಿನಾಂಕ: 24/29.07.2008.

2) ಪತ್ರಸಂಖ್ಯೆ: ಯುಸೇಕ್ರೀನಿ/ಸಿ1/03/08–09, ದಿನಾಂಕ:17.12.2008.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿರುವ ಕ್ರೀಡಾ ತರಬೇತುದಾರರ ವೃಂದದ ದಿನಾಂಕ:01.01.2008ರಲ್ಲಿರುವಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಈ ಅಧಿಕೃತ ಜ್ಞಾಪನಾ ಪತ್ರದೊಂದಿಗೆ ಲಗತ್ತಿಸಿ ಹೊರಡಿಸಲಾಗಿದೆ. ಈ ಜೇಷ್ಠತಾ ಪಟ್ಟಿಯಲ್ಲಿ ನ್ಯೂನತೆ, ತಪ್ಪು, ವಗೈರೆಗಳ ಬಗ್ಗೆ ಕ್ರೀಡಾ ತರಬೇತುದಾರರ ಮತ್ತು ಇಲಾಖೆಯ ಇತರೆ ಅಧಿಕಾರಿಗಳ ಆಕ್ಷೇಪಣೆಗಳು ಇದ್ದಲ್ಲಿ ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳ ಒಳಗಾಗಿ ಸರ್ಕಾರಕ್ಕೆ ಮಾಹಿತಿಯನ್ನು ಕಳುಹಿಸಬೇಕೆಂದು ಕೋರಲಾಗಿದೆ.

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

**ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕ್ರೀಡಾ ತರಬೇತುದಾರರ ವೃಂದದ ದಿನಾಂಕ:01.01.2008ರಲ್ಲಿ ಇದ್ದಂತೆ ಕರಡು ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು | ಹುದ್ದೆ | ಹುಟ್ಟಿದ ದಿನಾಂಕ | ಕರ್ನಾಟಕ ರಾಜ್ಯ ಕ್ರೀಡಾ ಪರಿಷತ್ತಿನಲ್ಲಿ ತರಬೇತುದಾರರಾಗಿ ನೇಮಕಾತಿ ಹೊಂದಿದ ದಿನಾಂಕ | ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ವಿಲೀನಾತಿಗೊಂಡ ದಿನಾಂಕ |
|---|---|---|---|---|---|
| 1. | ಸಿ.ಯು. ಈರಪ್ಪ | ಹಾಕಿ ತರಬೇತುದಾರರು | 28.03.1952 | 31.08.1979 | 31.08.1979 |
| 2. | ಎಂ. ರಾಯಪ್ಪ | ಫುಟ್ಬಾಲ್ ತರಬೇತುದಾರರು | 04.10.1951 | 03.09.1979 | 03.09.1979 |
| 3. | ರಾಮೇಗೌಡ | ವಾಲೀಬಾಲ್ ತರಬೇತುದಾರರು | 23.05.1953 | 03.09.1979 | 03.09.1979 |
| 4. | ಪ್ರತಾಪ್ ಕುಮಾರ್ | ಖೋ–ಖೋ/ ಕಬ್ಬಡಿ ತರಬೇತುದಾರರು | 23.10.1955 | 03.09.1979 | 03.09.1979 |
| 5. | ಜಿ. ಬಂಡಪ್ಪ | ವಾಲಿಬಾಲ್ ತರಬೇತುದಾರರು | 08.03.1951 | 04.09.1979 | 04.09.1979 |
| 6. | ಎಲ್. ಕೃಷ್ಣ | ಕ್ರಿಕೆಟ್ ತರಬೇತುದಾರರು | 25.07.1951 | 03.09.1979 | 22.09.1979 |
| 7. | ಎಂ. ಚಂದ್ರಶೇಖರ್ | ಖೋ–ಖೋ ತರಬೇತುದಾರರು | 24.05.1955 | 05.12.1994 | 05.12.1994 |
| 8. | ವಿ.ಎನ್. ಫಾಡಿ | ಕುಸ್ತಿ ತರಬೇತುದಾರರು | 26.05.1958 | 01.12.1994 | 01.12.1994 |
| 9. | ಎಂ.ಎನ್. ಸಿದ್ದರಾಮಪ್ಪ | ಫುಟ್ಬಾಲ್ ತರಬೇತುದಾರರು | 29.11.1953 | 01.12.1995 | 01.12.1995 |

**ಎಸ್.ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

ಪಿ.ಆರ್.126

**COMMERCE AND INDUSTRIES DEPARTMENT**

**NOTIFICATION**

**No.CI 196 SGF 08, Bangalore, Dated:27th December, 2008**

Whereas it is necessary to make an order with a view to enabling M/s G.M.R. Industries Limited Sugar Factory, Hullatti, Haliyala Taluk, North Canara District (M/s Bharath Sugar Mills (L), to purchase the quantity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, Therefore, in exercise of the powers conferred by clause 6, 7, 8 and 9 of the Sugarcane (Control) order 1966 read with CSR 1127, Dated:16th July, 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely:

**1. Title, Commencement and Duration of Operation:**

i. This Order may be called the Karnataka Sugarcane (Regulation of Distribution) M/s. G.M.R. Industries Limited Sugar Factory, Hullatti, Haliyala Taluk, North Canara District order 2008.

ii. It shall come into force at once and shall remain in force till withdrawn or repealed subject to amendments as the State Government may make from time to time.

**2. Definitions:** In this order:

a. Factory means the premises of the factory at Hullatti, North Canara District. Owned by M/s G.M.R. Industries Limited Sugar factory, Hullatti including the precincts of such factory.

b. 'Form' means a form appended to this order.

c. Words and expressions used in this order but not defined shall have the meaning assigned to them in clause 2 of the Sugarcane (Control) order 1966.

**3.** Determination of the quantity of Sugarcane required by the factory and reservation of the area for supply of sugarcane.

i. The crushing capacity of G.M.R. Industries Limited Sugar Factory, Hullatti, being 3500 TCD. The quantity of Sugarcane required by the factory during a year is about 6.00 Lakh M.Ts to 7.00 Lakh M.Ts.

ii. The factory shall secure the sugarcane determined under subclause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories likely to come up in that area are established in which case the Villages shall be reallocate.

**4. Fixiation of Quantity of Sugarcane to be Supplied by the Grower:**

Every grower of sugarcane in the area reserved temporarily as specified in Schedule-I shall supply to the factory ninety five percent of the sugarcane grown by each such grower Co-operative Society operating in the reserved area, through such society.

**5. Agreement to supply or Purchase the Determined Quantity of Sugarcane.**

Every grower of sugarcane or a sugarcane grower Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4.

**6. Prohibition of export of sugarcane from Area Reserved Temporarily.**

No. Sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. Issue of Permits:**

i. Application for the grant of a permit under clause-6 shall be made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forefeited, pass order forfeiting the whole or part of the amount deposited as security.

By Order and in the name of the Governor of Karnataka,

**P. ANANDA KUMAR**

Desk Officer (Sugar)

Commerce & Industries Department.

**SCHEDULE-I**

List of additional Villages allotted to G.M.R. Industries Limited Sugar Factory, Hullatti, Haliyala taluk, North Canara District temporarily for supply of Sugar Cane.

| Sl. No. | Name of the Taluk & District |
|---|---|
| 1. | All Villages of Hubli Hobli of Hubli Taluk of Dharwad District. |
| 2. | All Villages of Chabbi Hobli of Hubli Taluk of Dharwad District. |

CI 196 SGF 2008

**P. ANANDA KUMAR**

Desk Officer (Sugar)

Commerce & Industries Department.

**SCHEDULE-II- FORM-I**

**(SEE CLAUSE 6)**

The Karnataka Sugarcane (Regulation of Distribution), M/s. G.M.R. Industries Limited Sugar Factory, Hullatti, Haliyala Taluk, North Canara District order 2008.

**Permit No.** **Date**

1. Full name of the permit holder :
2. Father's Name :
3. Residential Address in full :
4. Quantity of Sugarcane for which permit is granted for export :
5. Area and village from which Sugarcane is permitted to be Exported. :
6. A. Place to which it is to be exported

   B. The purpose for which export is permitted.

   i. For Sale

   ii. For crushing sugar cane juice for Manufacture of Gur/Sakkare Gul/ Jaggery Rabi or Khandasari.
7. Their permit is valid upto :
8. The permit is granted subject to the following terms and conditions. :

   a. Permit is not transferable.

b. The permit shall be produced on demand by an officer authorized by the Deputy Commissioner.

c. On expiry of the validity of the permission within 48 hours of the expiry of the validity date the permit shall be surrendered to the permit issuing authority.

Place: SIGNATURE OF THE PERMIT ISSUING AUTHORITY.

Date

**SCHEDULE-II-FORM-II**

**(SEE CLAUSE 7)**

The Karnataka Sugarcane (Regulation of Distribution), M/s. G.M.R. Industries Limited Sugar Factory, Hullatti, Haliyala Taluk, North Canara District order 2008 Application for the grant of permit for exporting sugarcane from a reserved area.

1. Full Name of the Applicant :
2. Father's Name :
3. Residential Address in full :
4. Quantity of Sugarcane for which permit is requested for export :
5. Area and the village from which Sugarcane is intended to be exported :
6. The purpose for which the export is intended
   i) For Sale
   ii) For Crushing Sugarcane Juice or manufacture of Gur/Sakkare Gul/ Jaggery/ Rabi/ or Khandasari for sale or self consumption :

I declare that, I am fully aware of the provisions of the Karnataka Sugarcane (Regulation of Distribution), M/s. G.M.R. Industries Limited Sugar Factory, Hullatti, Haliyala Taluk, North Canara District order 2008 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.I of the Schedule appended to the Karnataka Sugarcane (Regulation of Distribution), M/s. G.M.R. Industries Limited Sugar Factory, Hullatti, Haliyala Taluk, North canara District order 2008 and I agree to abide by them.

Place: SIGNATURE OF THE APPLICANT

Date:

**P. ANANDA KUMAR**

PR-63 Desk Officer (Sugar)

Commerce & Industries Department.

**KARNATAKA STATE CONSUMER DISPUTES REDRESSAL COMMISSION**

**BASAVA BHAVANA, HIGH GROUNDS, BANGALORE-560001**

**NOTIFICATION**

**No. KSC/ADM/48/ 2003-04, Dated:15th December, 2008**

**Sub:** Calendar-2009 of Karnataka Consumer Disputes Redressal State Commission.

**Ref:** Calendar-2009 of Hon'ble High Court of Karnataka.

The Karnataka Consumer Disputes Redressal State Commission, Bangalore, adopts to follow the General Holidays and Optional Holidays specified by the Government of Karnataka to be observed by all the Offices of the Government of Karnataka for the year 2009.

Except the days fixed for the hearing of urgent matters, there will be no regular sittings during the period mentioned below:

1. From Monday the 27th April, 2009 to Sunday the 24th May, 2009 (bdi)
2. From Tuesday the 22nd September, 2009 to Thursday the 1st October, 2009 (bdi)
3. From Wednesday the 23rd December, 2009 to Friday the 01st January, 2010 (bdi)

The Office of the Karnataka State Consumer Disputes Redressal Commission will be working from 10.00 AM to 5.30 PM on all working days of the State Government and the non sitting days mentioned above.

All the District Forums in the State of Karnataka will work on all working days of the State Government.

By Order of the Hon'ble President,

**C. HALAPPA**

PR-62

Registrar-cum-Administrative Officer,
Karnataka State Consumer Disputes,
Redressal Commission, Bangalore.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋ.ಬಂ. ಮತ್ತು ಒ ಜ ಸಾ ಇಲಾಖೆ, ಉಪವಿಭಾಗ, ಬೇಲೂರು**

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ: ಸ.ಕಾ.ಇಂ/ಲೋ.ಬ.ಒ.ಜ.ಸ.ಇ.ಉ.ವಿ/ಬೇಲೂರು/ ಮಾಹಿತಿ ಹಕ್ಕು/2008–09/173,**

**ದಿನಾಂಕ:11ನೇ ಆಗಸ್ಟ್, 2008**

**ವಿಷಯ:** ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಪ್ರಕಾರ ಕ್ರಮ ಜರುಗಿಸುವ ಬಗ್ಗೆ ಸೂಚನೆಗಳು.

**ಉಲ್ಲೇಖ:** 1) ಸರ್ಕಾರದ ಸುತ್ತೋಲೆ ಸಂ:ಗ್ರಾಅಪ:324:ಕೆ.ಎಸ್.ಎಸ್.2005:ದಿನಾಂಕ:25.08.2005.

2) ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ಅಧಿಸೂಚನೆ ಸಂ:ಸಿಬಿಎಸ್:ಮಾಹಿತಿ ಹಕ್ಕು ಕೈಪಿಡಿ 2005 ಇಎಸ್‌ಎಸ್:2005–06, ದಿನಾಂಕ:19.09.2005.

3) ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಹಾಸನ ವೃತ್ತ, ಹಾಸನ ಇವರ ಅಧಿಸೂಚನೆ ಸಂ. ಸೂಇಂ: ಲೋಇ:ಹಾವೃ:ಸಿ–1: ಮಾಹಿತಿಹಕ್ಕು 2006–07:737 ದಿನಾಂಕ:23.06.2007.

ರಾಜ್ಯದಲ್ಲಿ ನಾಗರೀಕರಿಗೆ ಮಾಹಿತಿ ಪಡೆಯಲು ಅವಕಾಶದ ಹಕ್ಕಿಗಾಗಿ ರಚಿತವಾಗಿರುವ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ–2005 (2005ರ ಕೇಂದ್ರ ಕಾಯ್ದೆ ಸಂಖ್ಯೆ:22) ಅನ್ನು ಜಾರಿಗೊಳಿಸುವಲ್ಲಿ ಅನುಕೂಲವಾಗುವಂತೆ ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ 2005 ಇಎಸ್‌ಎಸ್: 2005–06 ದಿನಾಂಕ:19.09.2005ರಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯವಿಧಾನದ ಬಗ್ಗೆ ಮಾಹಿತಿ ನೀಡಲು ಸೆಕ್ಷನ್ 5(1)ರ ಅಡಿಯಲ್ಲಿ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವಿಭಾಗ, ಹಾಸನ ರವರನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ಹಾಗೂ ಸೆಕ್ಷನ್ 19(1)ರ ಅಡಿಯಲ್ಲಿ ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವೃತ್ತ, ಹಾಸನ ರವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ. ಹಾಗೂ ಸೆಕ್ಷನ್ 5(2)ರ ಅಡಿಯಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಉಪವಿಭಾಗ ಬೇಲೂರು ಇವರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಿಸಲ್ಪಟ್ಟಿರುವುದರಿಂದ ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

| ಕ್ರ. ಸಂ. | ಸಂಸ್ಥೆಗಳ ಸಾರ್ವಜನಿಕ ಪ್ರಾಧಿಕಾರ | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ಲೋಕೋಪಯೋಗಿ ಇಲಾಖೆ ಉಪ–ವಿಭಾಗ ಬೇಲೂರು. | ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ವಿಭಾಗ ಹಾಸನ. | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಉಪ–ವಿಭಾಗ, ಬೇಲೂರು. | ಅಧೀಕ್ಷಕ ಇಂಜಿನಿಯರ್, ಲೋಕೋಪಯೋಗಿ ಬಂದರು ಒಳನಾಡು ಜಲ ಸಾರಿಗೆ ಇಲಾಖೆ ಹಾಸನ ವೃತ್ತ, ಹಾಸನ. |

ಅದೇ ರೀತಿ ಅಧಿನಿಯಮದ ಸೆಕ್ಷನ್ 19(1) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಮೇಲ್ಮನವಿ ಸಾರ್ವಜನಿಕ ಪ್ರಾಧಿಕಾರದಲ್ಲಿ ಪ್ರಾಧಿಕಾರ ಎಂದು ಗುರುತಿಸಲಾಗಿದೆ.

ಆದುದರಿಂದ ನಾಗರೀಕರು ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಬೇಲೂರು ವ್ಯಾಪ್ತಿಯಲ್ಲಿ ನಿರ್ವಹಿಸಲ್ಪಡುವ ಅಥವಾ ಅನುಷ್ಠಾನಗೊಳಿಸಲ್ಪಡುವ ವಿವಿಧ ಅಭಿವೃದ್ಧಿ ಕಾರ್ಯಗಳ ಸಂಬಂಧವಾಗಿ ಮಾಹಿತಿ ಪಡೆಯಲು ಮೇಲಿನ ಮೇಲ್ಮನವಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನು ಸಂಪರ್ಕಿಸಿ ನಿಯಮದಲ್ಲಿ ತಿಳಿಸಿರುವಂತೆ ನಿಯಮಾನುಸಾರ ಮಾಹಿತಿಯನ್ನು ಪಡೆಯಬಹುದಾಗಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು.

**ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಉಪವಿಭಾಗ, ಬೇಲೂರು**
**ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (2005ರ ಕೇಂದ್ರ ಕಾಯ್ದೆ ಸಂಖ್ಯೆ: 22)**

ಸಾರ್ವಜನಿಕ ಪ್ರಾಧಿಕಾರಗಳಿಂದ ಮಾಹಿತಿ ಪಡೆಯಲು ನಾಗರೀಕರಿಗೆ ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2005ರ ಅನುಸಾರ (ಕೇಂದ್ರ ಕಾಯ್ದೆ ಸಂಖ್ಯೆ: 22: 2005ರ ಅಡಿ) ಸೆಕ್ಷನ್ (3) ಮತ್ತು (4)ರಂತೆ ಅವಶ್ಯ ಪ್ರಚಾರವನ್ನು ಕಛೇರಿಯ ಪ್ರಕಟಣಾ ಫಲಕದಿಂದ ದಿನಪತ್ರಿಕೆಗಳು ಸಾರ್ವತ್ರಿಕ ಪ್ರಚಾರ ಮಾಧ್ಯಮಗಳ ಮೂಲಕ ಪ್ರಚಾರ ಇಂಟರ್‌ನೆಟ್ ಇತ್ಯಾದಿ ಪ್ರಚಾರ ಸಾಧನೆಗಳ ಮೂಲಕ ಪ್ರಚಾರಪಡಿಸಿ ಮಾಹಿತಿ ಪಡೆಯಲು ನಾಗರೀಕರಿಗೆ ಬೇಕಾದ ವಿವರಗಳನ್ನು ಒದಗಿಸಲು ಸೂಚನೆ ಇರುತ್ತದೆ. ಇದಕ್ಕಾಗಿ "ದಿ ಗೆಜೆಟ್ ಇಂಡಿಯಾ ಎಕ್ಸ್ಟ್ರಾರ್ಡಿನರಿ" ಸಂಚಿಕೆಯಲ್ಲಿ ವಿಷದಪಡಿಸಿರುವಂತೆ.

ಲೋಕೋಪಯೋಗಿ ಇಲಾಖೆ ಉಪವಿಭಾಗ, ಬೇಲೂರು ಕಛೇರಿಗೆ ಸಂಬಂಧಿಸಿದ ಕಾರ್ಯಚಟುವಟಿಕೆಗಳು, 2008–09ನೇ ಸಾಲಿಗೆ ಕಾರ್ಯಗತಗೊಳಿಸಬೇಕಾದ ವಿವರ ಮತ್ತು ವಿವಿಧ ಹಂತಗಳಲ್ಲಿ ಇರುವ ಹಣಕಾಸಿನ ಪ್ರತ್ಯಯೋಜನೆ ಅಧಿಕಾರ, ಮತ್ತು ಮಾಹಿತಿ ಪಡೆಯಲು ನಾಗರೀಕರು ಅನುಸರಿಸಬೇಕಾದ ವಿಧಾನಗಳು ಅವಶ್ಯ ನಮೂನೆ ಶುಲ್ಕದ ವಿವರ ಇತ್ಯಾದಿ ಸಂಪೂರ್ಣ ವಿವರಗಳನ್ನೊಳಗೊಂಡ ಮಾಹಿತಿಯನ್ನು ಸಂಘಟನಾ ಫಲಕದಲ್ಲಿ (ಆರ್ಗನೈಸೇಷನ್ ಚಾರ್ಟ್ ಸಹಿತ) ಸಿದ್ದಪಡಿಸಿದೆ.

ಕೇಂದ್ರ ಗೆಜೆಟ್‌ನಲ್ಲಿ ಪ್ರಕಟಪಡಿಸಿರುವಂತೆ ಪ್ರತಿಯೊಂದು ಸಕ್ಷಮ ಪ್ರಾಧಿಕಾರವು ಸೆಕ್ಷನ್ (3), (4), (1)ರ ಅಡಿಯಲ್ಲಿ ಹೊರಡಿಸಬೇಕಾದ ಕೈಪಿಡಿಯನ್ನು ನಾಗರೀಕರು ಉತ್ತಮ ರೀತಿಯಲ್ಲಿ ಬಳಸಿಕೊಂಡು ಸ್ವಾಸ್ಥ ಸಮಾಜದ ನಿರ್ಮಾಣದೆಡೆ ದೇಶವನ್ನು ಕೊಂಡೊಯ್ಯಲು ಮತ್ತು ಪ್ರತಿಯೊಬ್ಬ ಪ್ರಜೆಗೂ ಸಂವಿಧಾನದತ್ತವಾಗಿ ಬಂದಿರುವ ಮೂಲಭೂತ ಹಕ್ಕುಗಳಂತೆ ದೇಶದ ಉನ್ನತಿ ಬಗ್ಗೆ ಚಿಂತಿಸುವಂತಾಗಲೂ ಕ್ರೋಢಿಕೃತ ಸಂಪನ್ಮೂಲ ಸಮರ್ಥ ಬಳಕೆ ಆಗುತ್ತದೆಯೇ ಅಥವಾ ಯಾವುದೇ ಅನುಮಾನಕ್ಕೆ ಆಸ್ಪದವಿಲ್ಲದಂತೆ ಪಾರದರ್ಶಕತೆ ಪಾಲಿಸಲಾಗುತ್ತಿದೆಯೇ ಎಂಬುದನ್ನು ಅರಿಯಲು ಈ ಕೈಪಿಡಿ ಸಹಕಾರಿಯಾಗಲಿ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಲೋ ಬಂ ಮತ್ತು ಒ ಜ ಸಾ ಇಲಾಖೆ,
ಉಪವಿಭಾಗ, ಬೇಲೂರು.

**1. ಇಲಾಖೆಯ ಪ್ರಾಧಿಕಾರದ ಕಾರ್ಯಚಟುವಟಿಕೆಗಳು ಮತ್ತು ಕರ್ತವ್ಯಗಳ ವಿವರ**

ಕರ್ನಾಟಕ ರಾಜ್ಯದ ಲೋಕೋಪಯೋಗಿ ಇಲಾಖೆ (ದಕ್ಷಿಣ) ಅಧೀನದಲ್ಲಿ ಮುಖ್ಯ ಇಂಜಿನಿಯರ್ ರವರನ್ನು ಮುಖ್ಯಸ್ಥರೆಂದು ಗುರುತಿಸಲಾಗಿದ್ದು ಬೆಂಗಳೂರಿನಲ್ಲಿ ಕೇಂದ್ರಸ್ಥಾನ ಹೊಂದಿರುತ್ತಾರೆ. ವೃತ್ತ ಕಛೇರಿಗೆ ಅಧೀಕ್ಷಕ ಇಂಜಿನಿಯರ್‌ರವರು ಮುಖ್ಯಸ್ಥರಾಗಿದ್ದು ಹಾಸನ ವಿಭಾಗವು ಹಾಸನ ವೃತ್ತದ ವ್ಯಾಪ್ತಿಯಲ್ಲಿ ಬರುತ್ತದೆ. ಈ ಉಪವಿಭಾಗ

ಮಟ್ಟದಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮುಖ್ಯಸ್ಥರಾಗಿರುತ್ತಾರೆ. ಉಪ–ವಿಭಾಗಗಳಲ್ಲಿ ಕರ್ತವ್ಯ ನಿರ್ವಹಿಸುವ ತಾಂತ್ರಿಕ ಸಿಬ್ಬಂದಿಗಳು ಕಾಮಗಾರಿಯ ಅನುಷ್ಠಾನದಲ್ಲಿ ಮುಖ್ಯ ಪಾತ್ರ ವಹಿಸುತ್ತಾರೆ. ಪೂರಕವಾಗಿ ಆಡಳಿತ ಸಿಬ್ಬಂದಿ ಕರ್ತವ್ಯ ನಿರ್ವಹಿಸುತ್ತಾರೆ.

ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸರ್ಕಾರದ ಪಾರದರ್ಶಕ ನಿಯಮಗಳನ್ನು ಅನುಸರಿಸಿ ಅಂದಾಜು ತಯಾರಿಕೆ, ಟೆಂಡರ್ ಮತ್ತು ಕೊಟೇಷನ್, ಬಜೆಟ್ ಕಾಮಗಾರಿಗಳು, 3054 ಯೋಜನೆಯ ಕಾಮಗಾರಿಗಳು, ನಬಾರ್ಡ್ ಕಾಮಗಾರಿಗಳು, ರಾಜ್ಯ ಹೆದ್ದಾರಿ ನಿರ್ವಹಣೆ ಕಾಮಗಾರಿಗಳು, ನೈಸರ್ಗಿಕ ವಿಕೋಪಕ್ಕೆ ಸಂಬಂಧಪಟ್ಟ ಕಾಮಗಾರಿಗಳು, ಸಂಸತ್ ಸದಸ್ಯರ: ಶಾಸಕರ ಪ್ರದೇಶ ಅಭಿವೃದ್ಧಿ ಕಾಮಗಾರಿಗಳು ಇತ್ಯಾದಿಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಗಳು ಲೋಕೋಪಯೋಗಿ ಇಲಾಖೆ ಉಪ–ವಿಭಾಗಗಳ, ಬೇಲೂರು ಮುಖ್ಯ ಕಾರ್ಯ ಚಟುವಟಿಕೆಗಳಾಗಿರುತ್ತವೆ. ಸಂಘಟನಾಚಾರ್ಟನ್ನು ಇದರೊಂದಿಗೆ ಲಗತ್ತಿಸಿದೆ.

**2. ಅಧಿಕಾರಿಗಳ: ಸಿಬ್ಬಂದಿವರ್ಗದವರ ಅಧಿಕಾರ ಮತ್ತು ಕರ್ತವ್ಯಗಳು**

ಲೋಕೋಪಯೋಗಿ ಈ ಉಪ–ವಿಭಾಗಕ್ಕೆ ಸಹಾಯಕ ಕಾರ್ಯಪಾಲಕ ಇಂಜಿನಿಯರವರು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಉಪ–ವಿಭಾಗ ಕಛೇರಿಯ ಅಧೀನದಲ್ಲಿ ಸಹಾಯಕ: ಕಿರಿಯ ಇಂಜಿನಿಯರುಗಳು ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಪೂರಕವಾಗಿ ಆಡಳಿತ ಸಿಬ್ಬಂದಿಯವರು ಕರ್ತವ್ಯ ನಿರ್ವಹಿಸುತ್ತಿರುತ್ತಾರೆ. ಈ ಉಪವಿಭಾಗದಿಂದ ಅಂದಾಜು ಪಟ್ಟಿಗಳನ್ನು ತಯಾರಿಸಿ ಸಲ್ಲಿಸುವುದು ಅನುಮೋದನೆಗೊಂಡ ಕಾಮಗಾರಿಗಳ ನಿರ್ವಹಿಸಿದ ಬಾಬ್ತು ಬಿಲ್ಲುಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು, ನಕ್ಷೆಗಳನ್ನು ತಯಾರಿಸುವುದು, ಕಾಮಗಾರಿಗಳ ಉಸ್ತುವಾರಿ ನೋಡಿಕೊಳ್ಳುವುದು. ಹಾಗೂ ನಿರ್ವಹಣೆ.

**3. ಉಸ್ತುವಾರಿಕೆ: ಲೆಕ್ಕ ಪತ್ರಗಳ ನಿರ್ವಹಣೆ: ಇತ್ಯಾದಿ ವಿಚಾರಗಳ ಪಾಲನೆ: ಸಮೂಚಿತ ಮಾರ್ಗ:**

ಲೋಕೋಪಯೋಗಿ ಇಲಾಖೆಯಲ್ಲಿ ಈ ಉಪ ವಿಭಾಗಕ್ಕೆ ಸಂಬಂಧಿಸಿದ ಅನುಮೋದನೆಯಾಗಿರುವ ಕಾಮಗಾರಿಗಳಿಗೆ ಸಂಬಂಧಿಸಿದ ಅಂದಾಜು ಪಟ್ಟಿಯನ್ನು ಹಾಗೂ ನಕಾಶೆಯನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸಲಾಗುವುದು. ಹಾಗೂ ನಿರ್ವಹಿಸಲಾದ ಕಾಮಗಾರಿಗಳ ಬಿಲ್ಲುಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸಲಾಗುವುದು.

**4. ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಬದ್ಧತೆ:**

ಸರ್ಕಾರದಿಂದ ಅನುಮೋದನೆಯಾಗುವ ಕಾರ್ಯಕ್ರಮದಂತೆ ಇಲಾಖಾ ನಿಯಮಾನುಸಾರ ಕಾಮಗಾರಿಗಳನ್ನು ನಿರ್ವಹಿಸಲಾಗುವುದು.

**5. ನಿಯಮಗಳು ನಿರ್ಣಯಗಳು ಸೂಚನೆಗಳು ನಿಯಮಾವಳಿಗಳು ದಾಖಲೆಗಳನ್ನು ಅನುಸರಿಸಿ ಕಾರ್ಯಕ್ರಮಗಳನ್ನು ಇಲಾಖೆಯ ಅರ್ಹ ಸಿಬ್ಬಂದಿಗಳಿಂದ ಜಾರಿಗೊಳಿಸುವ ಬಗ್ಗೆ:**

ಸರ್ಕಾರದ ನಿಯಮ ನಿರ್ಣಯ ನಿರ್ದೇಶನ ಸೂಚನೆಗಳನ್ನು ಹಾಗೂ ಇಲಾಖೆಗೆ ನಿಗದಿಪಡಿಸಿರುವ ಇಲಾಖೆ ಸಂಹಿತೆ ಹಾಗೂ ದಾಖಲೆಗಳನ್ನು ಅನುಸರಿಸಿ ಕಾನೂನಿನ ಚೌಕಟ್ಟಿನಲ್ಲಿ ಅರ್ಹ ಸಿಬ್ಬಂದಿಗಳಿಂದ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗುವುದು.

**6. ವಿವಿಧ ವಿಷಯಗಳಿಗನುಸಾರ (ಕೆಟಗರಿಗನುಗುಣವಾಗಿ) ದಾಖಲೆಗಳನ್ನು ನಿರ್ವಹಿಸುವುದು ಮತ್ತು ನಿಯಂತ್ರಣ:**

ತಾಂತ್ರಿಕ: ಹಾಗೂ ಆಡಳಿತ ಇತ್ಯಾದಿ ವಿಚಾರಗಳ ಅನುಸಾರವಾಗಿ ಉಪವಿಭಾಗ ಮಟ್ಟದಲ್ಲಿ ಕಛೇರಿ ಮುಖ್ಯಸ್ಥರ ನಿಯಂತ್ರಣದಲ್ಲಿ ದಾಖಲೆಗಳನ್ನು ಶಾಖಾ ಮುಖ್ಯಸ್ಥರ ಉಸ್ತುವಾರಿಕೆಯಲ್ಲಿ ನಿರ್ವಹಿಸಲಾಗುವುದು.

**7. ಕಾರ್ಯಕ್ರಮದ ಅನುಷ್ಠಾನದಲ್ಲಿ ಇರುವ ಏರ್ಪಾಡುಗಳು ಪ್ರತಿನಿಧಿತ್ವ ಸಾರ್ವಜನಿಕ ಅಹವಾಲು ಸಂಪರ್ಕಗಳ ವಿವರಗಳು:**

ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಜನಪ್ರತಿನಿಧಿಗಳ ಪಾತ್ರ ಹಿರಿದು ನೈಸರ್ಗಿಕ ವಿಕೋಪಗಳಾದ ನೆರೆ ಬರಪರಿಹಾರ ಕಾಮಗಾರಿಗಳು ವಾಸ್ತವಿಕ ಸ್ಥಿತಿಯನ್ನು ಅವಲಂಭಿಸಿರುತ್ತದೆ. ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳ ನಿರ್ದೇಶನ ಕಾಲಕಾಲಕ್ಕೆ ಸರ್ಕಾರದಿಂದ ಜಾರಿಗೊಳಿಸುವ ಸುತ್ತೋಲೆ ಮಾರ್ಗದರ್ಶಿ ಸೂತ್ರಗಳ ಅನುಸಾರ ಪಾರದರ್ಶಕ ನಿಯಮಾನುಸಾರ ಅನುಷ್ಠಾನಗೊಳಿಸಲಾಗುವುದು. ಸಾರ್ವಜನಿಕರ ಮಾಹಿತಿಗೆ ಬಾರದೆ ಯಾವುದೇ ಕಾರ್ಯಕ್ರಮದ ಅನುಷ್ಠಾನಕ್ಕೆ ಆಸ್ಪದ ಇರುವುದಿಲ್ಲ.

**8. ಸಾರ್ವಜನಿಕ ಹಿತಾಸಕ್ತಿ ಸಲುವಾಗಿ ರಚಿತವಾಗಿರುವ ಬೋರ್ಡುಗಳು, ಕೌನ್ಸಿಲ್‌ಗಳು ಸಮಿತಿಗಳು ಮತ್ತು ಅದರ ಪದಾಧಿಕಾರಿಗಳು ಸದಸ್ಯರುಗಳ ನಿರ್ಣಯಗಳ ಅನುಸಾರ ಕಾರ್ಯಕ್ರಮ:**

ಕರ್ನಾಟಕ ಸರ್ಕಾರದಿಂದ ಸಾರ್ವಜನಿಕ ಹಿತಾಸಕ್ತಿ ಅನುಸರಿಸಿ ತೆಗೆದುಕೊಳ್ಳುವ ನಿರ್ಣಯಗಳು: ಸೂಚನೆಗಳು ನಿರ್ದೇಶನಗಳನ್ನು ಮಾರ್ಗದರ್ಶಿ ಸೂಚನೆಯನುಸಾರ ಅನುಷ್ಠಾನಗೊಳಿಸಲಾಗುವುದು.

**9. ಅಧಿಕಾರಿಗಳ : ಸಿಬ್ಬಂದಿ ವರ್ಗದವರ ವಿವರ (ಡೈರೆಕ್ಟರಿ):**

ಈ ಲೋಕೋಪಯೋಗಿ ಉಪ–ವಿಭಾಗದಲ್ಲಿ ಮುಖ್ಯಸ್ಥರಾಗಿ ಸಹಾಯಕ ಕಾರ್ಯಪಾಲಕ ಇಂಜಿನಿಯರವರು ಕಾರ್ಯನಿರ್ವಹಿಸುತ್ತಾರೆ. ಉಪ–ವಿಭಾಗ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ತಾಂತ್ರಿಕ ಸಿಬ್ಬಂದಿ ಹಾಗೂ ಆಡಳಿತ ಸಿಬ್ಬಂದಿ ವಿವರಗಳನ್ನು ಈ ಪುಸ್ತಕದಲ್ಲಿ ಲಗತ್ತಿಸಿದೆ.

**ಸಾರ್ವಜನಿಕ ಮಾಹಿತಿಗಾಗಿ ವಿವರ ಪಡೆಯುವ ದೂರವಾಣಿ– ಮೊಬೈಲ್‌ಗಳ ವಿವರಗಳು ಈ ಕೆಳಗಿನಂತಿವೆ:**

| ಕ್ರ. ಸಂ. | ಹೆಸರು | ಹುದ್ದೆ | ದೂರವಾಣಿ ಮೊಬೈಲ್‌ಗಳ ಸಂಖ್ಯೆ ಕಛೇರಿ:08177–222348 |
|---|---|---|---|
| 1. | ಶ್ರೀ ಐ.ಇ. ಕೃಷ್ಣೇಗೌಡ | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 9448530074 |
| 2. | ಶ್ರೀ ಎ.ಬಿ. ಮಂಜೇಗೌಡ | ಸಹಾಯಕ ಇಂಜಿನಿಯರ್ | 9980010473 |
| 3. | ಶ್ರೀ ಬಿ.ಪಿ. ಸುರೇಶ್‌ಕುಮಾರ್ | ಸಹಾಯಕ ಇಂಜಿನಿಯರ್ | 9448220997 |
| 4. | ಶ್ರೀ ಜಿ.ಹೆಚ್. ಸೋಮಶೇಖರ್ | ಕಿರಿಯ ಇಂಜಿನಿಯರ್ | 9448655662 |
| 5. | ಶ್ರೀ ಸಂಗಮೇಶ್ ಎನ್. ಕಲಬುರ್ಗಿ | ಕಿರಿಯ ಇಂಜಿನಿಯರ್ (ನಿಯೋಜನೆ) | 9844153539 |
| 6. | ಶ್ರೀ ಎಂ. ಶಿವಕುಮಾರ್ | ಪ್ರಥಮ ದರ್ಜೆ ಸಹಾಯಕರು | 9980746500 |
| 7. | ಶ್ರೀ ಶಂಕರ ಲಿಂಗೇಗೌಡ | ದ್ವಿತೀಯ ದರ್ಜೆ ಸಹಾಯಕರು (ನಿಯೋಜನೆ) | 9448655557 |
| 8. | ಶ್ರೀಮತಿ ಕೆ.ಆರ್. ವಿಜಯಲಕ್ಷ್ಮಿ | ಬೆರಳಚ್ಚುಗಾರರು | |

**10. ಅಧಿಕಾರಿ: ಸಿಬ್ಬಂದಿ ವರ್ಗದವರಿಗೆ ಪ್ರತಿ ಮಾಹೆಯಲ್ಲಿ ಭರಿಸುವ ವೆಚ್ಚ ಸಂಬಳ ಸಾರಿಗೆ ಮತ್ತು ಇತರೆ ಭತ್ಯೆಗಳು ಪರಿಹಾರಗಳು ಇತ್ಯಾದಿಗಳಿಗೆ ವಾರ್ಷಿಕ ವೆಚ್ಚ:**

ಲೋಕೋಪಯೋಗಿ ಈ ಉಪವಿಭಾಗಕ್ಕೆ ಸರಾಸರಿ ತಿಂಗಳಿಗೆ ರೂ.2.50 ಲಕ್ಷ ವೇತನ ಮತ್ತು ಇತರೆ ಭತ್ಯೆಗಳಿಗಾಗಿ ವೆಚ್ಚವಾಗುತ್ತಿದೆ. ವಾರ್ಷಿಕ ಬಜೆಟ್ ಅಂದಾಜು ಸುಮಾರು ರೂ.30.00 ಲಕ್ಷ ಆಗಿರುತ್ತದೆ.

**11. ವಾರ್ಷಿಕ ಬಜೆಟ್ ಅಂದಾಜು ಹಂಚಿಕೆ ಎಲ್ಲ ಯೋಜನೆಗಳು ಸೇರಿ ಮತ್ತು ಉದ್ದೇಶಿತ ವೆಚ್ಚ ಮತ್ತು ವಿತರಣೆ ಮೇಲಿನ ವರದಿಗಳು:**

2008–09ನೇ ಸಾಲಿಗೆ ಹಂಚಿಕೆ ಆಗಿರುವ ಅನುದಾನದ ವಿವರ

| | **ಅಂದಾಜು ಮೊತ್ತ** |
|---|---|
| ಠೇವಣಿ ವಂತಿಕೆ ಕಟ್ಟಡ ನಿರ್ಮಾಣ ಕೆಲಸ | 37.50 ಲಕ್ಷ |
| ನಬಾರ್ಡ್ ಕಾಮಗಾರಿಗಳು ಆರ್.ಐ.ಡಿ.ಎಫ್–11,12 & 13 | 313.00 ಲಕ್ಷ |
| ರಾಜ್ಯ ಹೆದ್ದಾರಿ ನಿರ್ವಹಣೆ ಕಾಮಗಾರಿಗಳು | 170.54 ಲಕ್ಷ |
| ಎಂ.ಡಿ.ಆರ್. ರಸ್ತೆಗಳ ನಿರ್ವಹಣೆ ಇತ್ಯಾದಿ | 167.69 ಲಕ್ಷ |

ಬಿಡುಗಡೆಯಾಗಲಿರುವ ಅನುದಾನ ಅವಲಂಬಿಸಿ ಕಾರ್ಯಕ್ರಮ ರೂಪಿಸಲಾಗುವುದು.

**12. ಕಾರ್ಯಗತಗೊಳಿಸುವ ವಿಧಾನ ಸಬ್ಸಿಡಿ ಕಾರ್ಯಕ್ರಮಗಳು ಅನುದಾನ ಹಂಚಿಕೆ, ಫಲಾನುಭವಿಗಳ ವಿವರ ಇತ್ಯಾದಿ ಕಾರ್ಯಕ್ರಮಗಳ ವಿವರ:**

ಲೋಕೋಪಯೋಗಿ ಇಲಾಖೆ ಉಪ–ವಿಭಾಗ ವ್ಯಾಪ್ತಿಯಲ್ಲಿ ನಿರ್ವಹಿಸುವ ಕಾಮಗಾರಿಗಳನ್ನು ಟೆಂಡರ್ ಹಾಗೂ ತುಂಡು ಗುತ್ತಿಗೆ ವಿಧಾನದಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಕಾರ್ಯಗತಗೊಳಿಸಲಾಗುವುದು. ಯಾವುದೇ ಸಹಾಯಧನ ಯೋಜನೆ (ಸಬ್ಸಿಡಿ) ಕಾರ್ಯಕ್ರಮ ಇರುವುದಿಲ್ಲ.

**13. ಸ್ವೀಕೃತಿದಾರರಿಗೆ ರಿಯಾಯಿತಿ ಪರವಾನಗಿ ಅಥವಾ ಕ್ರೋಢೀಕರಣ ಪತ್ರ ಮಂಜೂರಾತಿ ಇತ್ಯಾದಿ:**

– ಅಂತಹ ಯಾವುದೇ ಕಾರ್ಯಕ್ರಮ ಇರುವುದಿಲ್ಲ–

**14. ಮಾಹಿತಿಗಾಗಿ ಸಂಕ್ಷಿಪ್ತಗೊಳಿಸಲಾದ ನಮೂನೆಗಳ ಲಭ್ಯತೆ:**

ಸಾರ್ವಜನಿಕರು ಮಾಹಿತಿ ಪಡೆಯಲು ಇಚ್ಛಿಸಿದಲ್ಲಿ ಸಂಕ್ಷಿಪ್ತ ರೀತಿಯಲ್ಲಿ ಮಾಹಿತಿ ಕೋರಿ ಅರ್ಜಿ ಸಲ್ಲಿಸಲು ನಮೂನೆಗಳನ್ನು ಒದಗಿಸಲಾಗುವುದು.

